ಪ್ರಕಾಶಕರು,

ಕೆ. ಆಯ್. ಅಂಗಡಿ,

ಮಲ್ಲಿಕಾರ್ಜುನ ಪ್ರಕಾಶನ ಅಂಣಿಗೇರಿ (S. Rly)

ಮುಖಚಿತ್ರ,

ಶ್ರೀ ವ್ಹಿ. ಎಂ. ಹುಬ್ಬಳ್ಳಿ.

⁑⁑

ಪಡಿಯಚ್ಚು,

ಶ್ರೀನಿವಾಸ ಮತ್ತು ಕಂಪನಿ, ಧಾರವಾಡ

§§

ಬೆಲೆ. ೦—೮—೧

††

ಮುದ್ರಕರು,

ವ್ಹಿ. ಜಿ. ಹೊಸಕೇರಿ ನರಗುಂದ.

††

ಮುದ್ರಣ ಸ್ಥಳ,

ಚಿಕ್ಕವೀರೇಶ್ವರ ಪ್ರಿಂಟಿಂಗ ಪ್ರೆಸ್,

ನರಗುಂದ. [ಜಿಲ್ಲಾ- ಧಾರವಾಡ]

# ಮೂರು ಮಾತುಗಳು.

ಸಿನೇಮಾ ನಟಿಯರ ಕನಸು ಕಾಣುತ್ತಿದ್ದೊಬ್ಬ ಯುವಕನಿಗೆ ಅಕಸ್ಮಿಕವಾಗಿ ಲಾಟರಿಯಹಣ ಬಂದುದು ನಾಲ್ಕು ಕೋಡು ಮೂಡಿದಂತಾಗಿತ್ತು ಇಂತಹ ತರುಣರನ್ನು ನಾವು ಮುಂಬಯಿಯತಂಹ ನಗರದಲ್ಲಿ ಪ್ರತಿನಿತ್ಯವೂ ಕಾಣಬಹುದು ಅಂತಹ ಒಬ್ಬ ಯುವಕನ ಚಿತ್ರವನ್ನು ಗೆಳೆಯ 'ಅಜ್ಞಾತ' ರು ಇಲ್ಲಿ ಒಳ್ಳೇ ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಬೆಳೆಯುತ್ತಿರುವ ಕಾದಂಬರಿ ಪ್ರಪಂಚದ ಪ್ರಸ್ತುತ ಸಮಯದಲ್ಲಿ ದಿನದಿನಕ್ಕೆ ಹೊಸ, ಹೊಸ ಲೇಖಕರು ಉದಯಿಸುತ್ತಿರುವದು ಸಂತೋಷದ ಸಂಗತಿ ಹೊಸಬರಿಗೆ ಪ್ರೋತ್ಸಾಹನೆಯನ್ನಿತ್ತು ಅವರ ಕೃತಿಗಳನ್ನು ಬೆಳಕಿಗೆ ತರುವದು ಉತ್ತಮ. ಹೊಸ ಲೇಖಕರ ಕೃತಿಗಳಿಂದು ಮೂಗು ಮುರಿಯುವ ಬದಲು ಅವನನ್ನು ಬೆಳಕಿಗೆ ತಂದರೆ ಹುದುಗಿದ ಎಂತೆಂತಹ ಅನರ್ಘ್ಯ ಕೃತಿಗಳು ಬಯಲಿಗೆ ಬಂದಾಗುತ್ತವೆ. ಬರುತ್ತವೆ.

ಹೊಸಲೇಖಕರನ್ನು ಮುಂದಕ್ಕೆ ತರಬೇಕೆಂಬ ಉದ್ದೇಶದಿಂದಲೇ ಉದಯಿಸಿದ " ಶ್ರೀ ಮಲ್ಲಿಕಾರ್ಜುನ ಪ್ರಕಾಶನ "ವು ಈ ಸಲ ತಮ್ಮ ಓದುಗರಿಗೆ 'ಅಜ್ಞಾತ'ರ ಪರಿಚಯು ಮಾಡಿಕೊಟ್ಟಿದೆ ಪ್ರಕಾಶನದ ಅಭಿಮಾನಿಗಳಾದ ಓದುಗಮಾರಾಟಗಾರರು ಎಂದಿನಂತೆ ಸಹಕರಿಸಿ ಪ್ರೋತ್ಸಾಹಿಸುವಿರೆಂದು ನಂಬಿದ್ದೇವೆ.

ಅಣ್ಣಿಗೇರಿ. —ಪ್ರಕಾಶಕರು.
ಜನೆವರಿ.
1955



# ನಾಲ್ಕು ಮಾತು.




ವಿಖ್ಯಾತಳೇ ಇರಲಿ, ಹೇಗೇ ಇರಲಿ; ಸಿನೇಮಾ ನಟಿಯಾದರೆ ತೀರಿತು ಅವಳು ತಮ್ಮೊಂದಿಗೆ ನಕ್ಕು ಒಂದು ಮಾತನ್ನಾಡಿದರೆ ತಮ್ಮ ಐಶ್ವರ್ಯವನ್ನು ಸೂರೆಮಾಡುವ, 'ಉದಾರ ಹೃದಯ'ದ ತರುಣರಿಗೇನೂ ಕೊರತೆಯಿಲ್ಲ, ಇಂದು ಅಂತಹ ಓರ್ವ ತರುಣನ ಕತೆಯೇ ಈ "ಫೋರ-ಟ್ವೆಂಟಿ" ಯಾಗಿದ್ದು. ನಟಿ ಕೈಕೊಟ್ಟಾಗ ನಿರಾಶನಾದ ಪ್ರೇಮಿ ಏನು ಮಾಡಲೂ ಹೇಸುವದಿಲ್ಲ ವೆಂಬುದನ್ನು ಇವರಲ್ಲಿ ಕಾಣಬಹುದಾಗಿದೆ.

ಕೈಯಲ್ಲಿ ಕಾಸಿಲ್ಲದೆ ಗೋಳಿಡುತ್ತಿರುವ ಓರ್ವ ಯುವಕ ವಿಖ್ಯಾತ ನಟಿ 'ಮಿಸ್‌ಮಾಲಾ' ಳ ಕನಸುಕಾಣುತ್ತಿರುತ್ತಾನೆ ಅಕಸ್ಮಿಕವಾಗಿ ಲಾಟರಿಯು ಹಣ ಕೈಗೆ ಬಂದು ಮಂಗನಿಗೆ ಸಾರಾಯಿ ಕುಡಿಸಿ ಚೇಳು ಕುಟುಕಿಸಿದಂತಾಗುತ್ತದೆ, ಮೊದಲೇ ಮಾಲಾಳ ಕನಸು ಕಾಣುತ್ತಿದ್ದ ಯುವಕ. ಚಿತ್ರೋದ್ಯಮದ ಓರ್ವ ಮಿತ್ರನ ಸಹಾಯದಿಂದ ಅವಳ ಪರಿಚಯ ಮಾಡಿಕೊಂಡು ನೀರಿನಂತೆ ಹಣ ವ್ಯಯಮಾಡುತ್ತಾನೆ. ಕೈಲಿ ಹಣವಿದ್ದಾಗ ಸಿಕ್ಕಂತೆ ತೂರದೆ, ಆಪತ್ಕಾಲಕ್ಕಾಗಿ ಕೊಂಚ ತೆಗೆದಿರಿಸುವದು ಒಳಿತೆಂದು ಹೇಳಿದ ಅಂಣನ ಮಾತುಗಳನ್ನು "ಸೊಡ್ಡಿಯಿಂದ ಬೀದದ್ದು ಕುದುರೆಯ ಬಾಲಕ್ಕೆ" ಎಂದು ಹಾಸ್ಯದಲ್ಲಿ ತೇಲಿಸಿ ಮಾಲಾಳ ಬೆನ್ನು ಹತ್ತುತ್ತಾನೆ. ಬಣ್ಣದಚಿಟ್ಟೆ ಮಾಲಾ ಎಲ್ಲರಂತೆ ಇವನು ಒಬ್ಬ 'ಬಕರಾ' ಎಂದು ಬಾವಿಸಿ ಅವನಿಂದ ಹಣವನ್ನು ಪಡೆಯುತ್ತಾ ಹೋಗುತ್ತಾಳೆ. ಮುಂದೆ ಅವಳ ಕೊಲೆಯೂ ಆಗುತ್ತದೆ. ನಟಿಯರ ಹಿಂದೆ ಬೆನ್ನು ಹತ್ತುವವರು ಪಕ್ಕಾ "ಚಾರ ಸೌ ಬೀಸ" (420) ಇರುತ್ತಾರೆಂಬುದನ್ನು ಗೆಳೆಯ 'ಅಜ್ಞಾತ'ರು ಈ ಕತೆಯಲ್ಲಿ ಚೆನ್ನಾಗಿ ವಿವರಿಸಿದ್ದಾರೆ.

ಒಮ್ಮೆ ಓದಲು ನಿರ್ಧರಿಸಿದರೆ, ಮುಗಿಸುವ ವರೆಗೂ ಕೆಳಗಿರಿಸಲು ಮನ ಒಪ್ಪದ ರೀತಿಯಲ್ಲಿ ಕತೆಯ ಓಟವನ್ನೇ ಸಾಗಿಸುವದು ಈ ಕತೆಯದೊಂದು ಕೈ ಶಿಷ್ಟ್ಯವೇ ಎನ್ನಬೇಕು. ಮುಂಬಯಿಗೆ ಚಿರಪರಚಿತರಾದ ಶ್ರೀ 'ಅಜ್ಞಾತ'ರು ತಮ್ಮ ಈ "ಫ್ಲೋರ-ಟ್ವೆಂಟಿ" ಯಲ್ಲಿ ಮುಂಬಯಿಯನ್ನು ಚನ್ನಾಗಿಯೇ ಬಳಿಸಿಕೊಂಡಿದ್ದಾರೆ. ಇದು ಅವರ ಪ್ರಥಮ ಕೃತಿಯಾದರೂ, ಓದುಗರಿಗೆ ಇದು ಪ್ರಥಮ ಕೃತಿಯೆಂದು ಭಾಸವಾಗುವದೇ ಇಲ್ಲ. ಇವರಿಂದ ಇದಕ್ಕೂ ಉತ್ತಮೋತ್ತಮ ಕೃತಿಗಳು ಹೊರ ಬರಬೇಕು.

ತಮ್ಮ ಕೃತಿಯನ್ನು 'ಓದುಗರಿಗೆ' ಅರ್ಪಿಸಿದ ಈ ಲೇಖಕನ ಕೃತಿಯನ್ನು ಓದುಗರು ಆದರದಿಂದ ಬರಮಾಡಿಕೊಳ್ಳುವಿರೆಂದು ಆಶಿಸುತ್ತೇನೆ.

**ಗದಗ** — **ಎಂ ಜೀವನ**

ಜನೆವರಿ ೧೯೫೪



# ಫ್ಲೋರ-ಟ್ವೆಂಟಿ

## (೧)

ಆ ದಿನ ಚಮನಲಾಲನಿಗೆ ಶುಕ್ರದೆಸೆ ಪ್ರಾರಂಭವಾಗಿತ್ತೆಂದು
ತೋರುತ್ತದೆ. ಮನೆಬಿಟ್ಟು ಎಂದೂ ಬೆಳಗಿನಲ್ಲಿ ಹೊರಗೆ ಹೊರಟವನಲ್ಲ
ಆತ. ರಾತ್ರಿ ಎರಡು ಗಂಟೆಗೆ ಮಲಗುವವನಿಗೆ ಬೆಳಗಿನಲ್ಲಿ ಒಂಬತ್ತರ ಒಳಗೆ
ಏಳುವ ಮನಸ್ಸೇ ಆಗದು. ಆದರೂ ಚಮನಲಾಲ ಮಾತ್ರ ಆ ದಿನ ಉಲ್ಲಾ
ಸದಿಂದ ನಡೆದಿದ್ದನು. ಫ್ಲೋರ್ಟವೇಯಾಕ್ಕೆ ಬಂದು, 'ಕೆಲಸವಿಲ್ಲದೆ ಇಷ್ಟೇ
ದಕ್ಷೆ ಹುಚ್ಚಿನಂತೆ ಬಂದೆ' ಎಂದು ತನ್ನಷ್ಟಕ್ಕೆ ತಾನೇ ನಕ್ಕನು. 'ಆಯಿತು
ಬಿಸಿಲೂ ಜೋರಾಗುತ್ತಿದೆ. ಏನಾದರೂ ತಂಪಾದ ಪಾನೀಯವನ್ನು ಸೇವಿ
ಸೋಣ'ವೆಂದು ಅಮೀರರೆಸ್ಟೋರೆಂಟಿನತ್ತ ನಡೆದನು.

ಅಮೀರರೆಸ್ಟೋರೆಂಟಿನಲ್ಲಿನ ಮೂಲೆಯಲ್ಲಿಯ ಒಂದು ಕುರ್ಚಿಯ ಮೇಲೆ
ಕುಳಿತುಕೊಂಡು 'ಕೋಕಾಕೋಲಾ' ಆರ್ಡರ ಮಾಡಿದನು ಮೇಜಿನ ಮೇಲಿ
ದ್ದ 'ಟೈಮ್ಸ್ ಆಫ್ ಇಂಡಿಯಾ' ದಿನ ಪತ್ರಿಕೆಯ ಮೂರನೆಯ ಪುಟವನ್ನು
ನೋಡುತ್ತಿದ್ದನು. ಒಂದು ಕ್ಲಬ್ಬಿನ ಸ್ವಸ್ಥನ ಜಾಹೀರಾತು ಅವನನ್ನು ಆಕ
ರ್ಷಿಸಿತು: "ಈ ದಿನ ರಾತ್ರಿ ರಿಜ್‌ದಲ್ಲಿ "ಮಿಸ್ ಮಾಲಾ"ಳ ಮನಸೆಳೆತಕ
ನೃತ್ಯಗಳು. ನಿಮ್ಮ ನಿಮ್ಮ ಟೇಬಲುಗಳನ್ನು ಮುಂಗಡವಾಗಿ ರಿಜರ್ವ ಮಾಡಿ
ಸಿರಿ" ಎಂದಿದ್ದಿತು. ಸುಖವಸ್ತು ಚಮನಲಾಲನಂತಹರು ಹೋಗದೆ ಇರು
ತ್ತಾರೆಯೆ? ಅಷ್ಟರಲ್ಲಿ ವೇಟರನು 'ಕೋಕಾಕೋಲಾ' ಬಾಟ್ಲಿಯನ್ನು ಬೂಚು
ತೆಗೆದು ಟೇಬಲ್‌ಮೇಲಿಟ್ಟು ಹೋದನು. ಗದ್ದಲವಿಲ್ಲದ ಆ ಹೋಟಲಿನಲ್ಲಿ
ಶಾಂತಿ ನೆಲೆಸಿದ್ದಿತು. ಚಮನಲಾಲ ಬಾಟ್ಲಿಯನ್ನು ಕೈಗೆ ತೆಗೆದುಕೊಂಡು
ಮುಂದಿನ ಜಾಹೀರಾತುಗಳನ್ನು ಓದುತ್ತಿದ್ದ. ಕೋಕಾಕೋಲಾ ಕುಡಿದು
ನಂತರ ವೇಟರ ಟೇಬಲ ಸ್ವಚ್ಛ ಮಾಡಿದ ಚಮಲಾಲ "ಚರ್ಚಮನ್ ಒಂದು
ಪ್ಯಾಕ" ಎಂದು ಆರ್ಡರ ಕೊಟ್ಟ. ವೇಟರನು ಕೂಡಲೇ ಹೋಗಿ ಚರ್ಚ
ಮನ್ ಸಿಗರೆಟ್ಟಿನ ಪ್ಯಾಕನ್ನು ತಂದುಕೊಟ್ಟ. ಚಮನಲಾಲ ಮುಂದಿನ ಪುಟ
ತಿರುವಿ ಸಿಗರೇಟು ಹಚ್ಚಿದ. ಅಷ್ಟರಲ್ಲಿಯೇ ಒಬ್ಬನು ರೆಸ್ಟೋರೆಂಟಿಗೆ ನುಗ್ಗಿ
'ಕಾಂಗ್ರ್ಯಾಚ್ಯುಲೇಶನ್ಸ್. ಚಮನ್‌ಲಾಲ!' ಎಂದು ಕೈ ಮುಂದೆ ಮಾಡಿದ.

ಚಮನಲಾಲ ಪೇಪರಿನಿಂದ ಮುಖವೆತ್ತಿ ಇಲ್ಲದ ಆಶ್ಚರ್ಯದಿಂದ, ಬಂದ ವ್ಯಕ್ತಿಯನ್ನೇ ನೋಡಿದ. "ಹಲೋ ಜಾರ್ಜ, ಏನು ಸಮಾಚಾರ? ಕಾಂಗ್ರ್ಯಾಚ್ಯುಲೇಶನ್ಸ್ ಯಾತಕ್ಕೆ ? "ಎಂದು ಕೇಳಿದ

" ಇದೋ ನಿಮ್ಮ ಬಹುಮಾನ ೫೦ ಸಾವಿರ ರೂಪಾಯಿಗಳು " ಎಂದು ಜಾರ್ಜ ಕಿಸೆಯೊಳಗಿಂದ ಒಂದು ಚೆಕ್ಕನ್ನು ತೆಗೆದು ಚಮನಲಾಲನ ಕೈಯಲ್ಲಿ ಕೊಟ್ಟ.

ಚಮನಲಾಲನಿಗೆ ಆಶ್ಚರ್ಯದೊಡನೆ ಆನಂದವೂ ಆಗಿದ್ದಿತು. ಜಾರ್ಜನ ಕಾಟಕ್ಕೆ ಬೇಸತ್ತು ಪೀಡೆ ತೊಲಗಲೆಂದು ಅವನಿಂದ ಡಜನ್ ನಾಲ್ಕು ನಂಬರಿನ ಒಂದು ಸೆಟ್ ಟಿಕೆಟ ಕೊಂಡಿದ್ದ ಈಗ ಅವನಿಗೆ ಅವರ ನೆನಪು ಕೂಡ ಇರಲಿಲ್ಲ. ಆದರೆ ಅದೇ ಇಂದು ನಿಧಿಯನ್ನು ಆಕಸ್ಮಾತ್ತಾಗಿ ಒದಗಿಸಿದ ಯೆಂದಮೇಲೇನು ಕೇಳುವದು? "ಕೂಡ್ರು ಜಾರ್ಜ. ಬಾಯ್, ಇನ್ನೆರಡು ಕೋಕಾಕೋಲಾ ಬರಲಿ" ಎಂದು ಆರ್ಡರ ಕಳಿಸಿದ. ತನ್ನಲ್ಲಿದ್ದ ಸಿಗರೇಟ ಪ್ಯಾಕನ್ನು ಜಾರ್ಜನತ್ತ ಸರಿಸಿ ಹೇಳಿದನು. "ಅಂತೂ ದೇವರು ನಮ್ಮ ಹಾಗೆ ಕುರುಡನಲ್ಲ. ಆದರೆ ನಮಗೆ ಅವಶ್ಯವಿದ್ದಾಗ ಮಾತ್ರನೆಲ್ಲ ಅವನು ಕೈ ಕೊಡುತ್ತಾನೆ. ಆದರ ಸಲುವಾಗಿಯೇ ಎಲ್ಲರೂ ಪರಿತಾಪಿಸುತ್ತಾರೆ, ನೋಡು ಜಾರ್ಜ." ಎಂದನು.

"ನೀವೇ ಅದೃಷ್ಟಶಾಲಿಗಳು ಚಮನಲಾಲ ಇದೀಗ ಆ ಸೇಟ ರತನಭಾಯಿ ಭೆಟ್ಟಿಯಾಗಿದ್ದ. ಅವನು ರಿಜಲ್ಟ ಶೀಟ ಕೇಳಿದ ತೋರಿಸಿದೆ. 'ಹೋಯಿತು ಹಣ ಕುದುರೆಯ ಬಾಲಕ್ಕೆ: ಎಂದು ಶಂಖ ಹೊಡೆದ'

"ಜೂಜು ಎಂದರೆ ಹೇಳಲಿಕ್ಕಾದೀತೇ ? ಅವನ್ಕೆಲ್ಲಿ ಗಣಿತ ಜ್ಞಾನ? ಅದಕ್ಕೆ ವ್ಯವಹಾರ ಜ್ಞಾನವೇ ಪ್ರಾಮುಖ್ಯ." ಎಂದನು ಚಮನ ಲಾಲ ಎದುರಿಸಿದ್ದ ನೀಳಗನ್ನಡಿಯಲ್ಲಿ ತನ್ನ ಉಲ್ಲಸಿತ ಮುಖವನ್ನು ನೋಡುತ್ತ.

ವೇಟರನು ಎರಡು ಕೋಕಾಕೋಲಾ ಬಾಟ್ಲಗಳನ್ನು ತಂದಿಟ್ಟು ಸರಿದುನಿಂತ.

ಚಮನಲಾಲ ಅವನಕೈಗೆ ಎಂಟಾಣೆ ಹಾಕಿದ. ಆತ ಸಲಾಂ ಹೊಡೆದು ತೆರಳಿದ.

"ನಮ್ಮ ಕಮೀಶನ್ ಕೊಡುತ್ತೀರಾ ಚಮನಲಾಲ ? " ಎಂದು ಜಾರ್ಜ ಕೇಳಿದ.

" ಓಹೋ ಅದಕ್ಕೇನಂತೆ ಸಾಯಂಕಾಲ ೫ ಗಂಟೆಗೆ ನನ್ನ ಫ್ಲಾಟಿಗೆ ಬಂದು ಬಿಡು. ನಾನು ಮನೆಗೆ ಹೋಗುವಾಗ ಬ್ಯಾಂಕಿಗೆ ಹೋಗಿ ಈ ಚೆಕ್ಕನ್ನು ಮುರಿಸಿ ಹಣ ಪಡೆದುಕೊಂಡೇ ಹೋಗುತ್ತೇನೆ. ಇನ್ನೊಂದು ಕೆಲಸ ಮಾಡು, ಜಾರ್ಜ. ರಿಜ್‌ನಲ್ಲಿ ಒಂದು ಟೇಬಲಿಗೆ ರಿಜರ್ವ್ ಮಾಡಿಸು ಇದು ತಕ್ಕೋ "ಎಂದು ಪರ್ಸಿನಿಂದ ಹದಿನೈದು ರೂಪಾಯಿಗಳನ್ನು ತಗೆದು ಅವನಿಗೆ ಕೊಟ್ಟ.

" ಆಗಲಿ, ನಾನಿನ್ನು ಬರುತ್ತೇನೆ. ಇನ್ನಿಬ್ಬರನ್ನು ಭೆಟ್ಟಿಯಾಗುವದಿದೆ ಅವರು ಆಫೀಸಿಗೆ ಹೋಗಿಬಿಟ್ಟಿದ್ದರು ಈಗಾಗಲೇ. ಗುಡ್‌ಮಾರ್ನಿಂಗ್."
ಎಂದು ಜಾರ್ಜ ರೆಸ್ಟೋರೆಂಟಿನಿಂದ ಹೊರಟು ಹೋದನು.

ಚಮನಲಾಲನು ಪರ್ಸನ್ನು ಕಿಸೆಯೊಳಗಿಡುವಾಗ, ಅಕಸ್ಮಾತ್ ನಿಧಿ ತಂದುಕೊಟ್ಟ ಚೆಕ್ಕನ್ನು ಮತ್ತೊಮ್ಮೆ ಉಲ್ಲಸಿತ ದೃಷ್ಟಿಯಿಂದ ನೋಡಿದನು.

ಎದುರಿನ ಗೋಡೆಯ ಮೇಲೆ ಗಡಿಯಾರ ಹತ್ತೂವರೆ ಘಂಟೆ ಬಾರಿಸಿತು. ಚಮನಲಾಲನು ಎದ್ದು ಬಿಲ್ಲು ಕೊಟ್ಟು ಹೊರಗೆ ಬಂದನು.

ಅಲ್ಲಿಯೇ ಸೆಕ್ರೆಟರಿಯೆಟನ ಬಳಿ ಟ್ಯಾಕ್ಸಿಯೊಂದು ನಿಂತಿತ್ತು. ಡ್ರಾಯವ್ಹರನೊದನೆ ವಿಚಾರಿಸಲಾಗಿ ಅದು ಖಾಲಿಇದೆಯೆಂದು ತಿಳಿದು ಬಂದಿತು "ಹಾಗಾದರೆ ನಡೆ." ಎಂದನು ಚಮನಲಾಲ. ಡ್ರಾಯವ್ಹರನು ಒಳಗೆ ಕುಳಿತು "ಯಲ್ಲಿಗೆ ಸೇಠಸಾಬ!" ಎಂದನು.

" ಮರ್ಕೆಂಟೈಲ ಬ್ಯಾಂಕ" ಎಂದುತ್ತರಿಸಿದನು ಚಮನಲಾಲ

ಟ್ಯಾಕ್ಸಿಯು ಹತ್ತು ನಿಮಿಷಗಳ ಒಳಗಾಗಿಯೇ ಚಮನಲಾಲನನ್ನು ಮರ್ಕೆಂಟೈಲ ಬ್ಯಾಂಕಿಗೆ ತಂದು ಬಿಟ್ಟಿತು ಡ್ರಾಯವ್ಹರನಿಗೆ ಒಂದು ರೂಪಾಯಿ ನೋಟು ಕೈಯಲ್ಲಿ ಹಾಕಿ "ನೀನಿನ್ನು ಹೋಗಬಹುದು" ಎಂದು ಅವನನ್ನು ಕಳುಹಿಸಿದನು.

" ಟ್ಯಾಕ್ಸಿ ಬೇಡವೇ, ಸೇಠಸಾಬ ? " ಎಂದು ಡ್ರಾಯವ್ಹರ ನಿಂತೇ ಕೇಳಿದ.

" ಅವಶ್ಯವಿಲ್ಲ ನನಗೆ ಬ್ಯಾಂಕಿನಲ್ಲಿ ಹೆಚ್ಚು ವೇಳೆಯಾಗಬಹುದು" ಎಂದು ಹೇಳಿ ಅವನು ಟ್ಯಾಕ್ಸಿ ಅಲ್ಲಿಂದ ಹೊರಟು ಹೋದ ಮೇಲೆಯೇ ಒಳಗೆ ನಡೆದನು.

ಮರುಕ್ಷಣದಲ್ಲಿಯೇ ಹೊರಗೆ ಬಂದನು ಆವನ ಕೈಯಲ್ಲಿ ಹ್ಯಾಂಡ ಬ್ಯಾಗ ಇರಲಿಲ್ಲ ಈಗ ಹಣವನ್ನು ಒಯ್ಯಲು ಅದು ಅವಶ್ಯವಾಗಿದ್ದಿತು ಅಲ್ಲಿಯೇ ನಿಂತಿದ್ದ ಒಂದು ಟ್ಯಾಕ್ಸಿಯನ್ನು ತಕ್ಕೊಂಡು 'ವ್ಹಾಟಆರೇಜ' ಸ್ಟೋರಿಗೆ ಹೋದ ಒಂದು ಉತ್ತಮ ಲೆದರ ಹ್ಯಾಂಡ ಬ್ಯಾಗ ತಕ್ಕೊಂಡವನೇ ಬ್ಯಾಂಕಿಗೆ ಮರಳಿದ. ಚೆಕ್ಕು ಕೊಟ್ಟು ಹಣ ಎಣಿಸಿಕೊಳ್ಳುತ್ತಿದ್ದ ಹಿಂದಿನಿಂದ ಯಾರೋ ಬಂದು ಬೆನ್ನಿಗೆ ಒಂದೇಟು ಕೊಟ್ಟರು. ಒಮ್ಮೆಲೆ ಹೆದರಿ ಹಿಂದೆ ನೋಡಿದ ದಂಪತಸೇಠ ಅವರು ಮಾತನಾಡಿಸಿದರು. "ಏನು ಒಳ್ಳೇ ಭಾರೀ ನೋಟುಗಳನ್ನೆಣಿಸುತ್ತೀರೀ ?" ಎಂದು ಹೇಗೆಂದು ತಲೆಯಲ್ಲಾಡಿಸಿ ಚಮನಲಾಲ ತನ್ನ ಕೆಲಸದಲ್ಲಿ ಮಗ್ನನಾದನು. ನೋಟುಗಳನ್ನೆಲ್ಲ ಹ್ಯಾಂಡಬ್ಯಾಗಿಗೆ ಹಾಕಿ ಚೆನ್ನಾಗಿ ಬಕ್ಕಲ್ ಬಿಗಿದು, ಕೀಲಿ ಹಾಕಿ, ಜೂಂಡಲಸವಾದ ಆರ್ನಿಕರೆಸ್ಟೋರೆಂಟಿನಿಂದ ತನನ್ನು ಇಲ್ಲಿಗೆ ತಂದು ಬಿಟ್ಟ ಟ್ಯಾಕ್ಸಿಯೇ ಒಂದು ನಿಂತಿತ್ತು ಎದುರಿಗೆ ಅದರಲ್ಲಿ ಇನ್ನೊಬ್ಬನಾರೇ ಕುಳಿತಿದ್ದ. ಡ್ರಾಯವ್ಹರನೇ ಕೇಳಿದ. "ಟ್ಯಾಕ್ಸಿ ಸೇಠಸಾಬ ?" ಚಮನಲಾಲನಿಗೆ ಸಂಶಯಬಂದಿತು. ಹಾಗೊ ಇಷ್ಟೊಂದು ಹಣವನ್ನು ಈ ಟ್ಯಾಕ್ಸಿಯಲ್ಲಿ ಮಲಬಾರಹಿಲ್ಲಿನವರೆಗೆ ಒಯ್ಯುವದೂ ಅಪಾಯಕರವೆನ್ನಿಸಿತು. ನಿಂತಲ್ಲಿಯೇ ನಿಂತುಬಿಟ್ಟ ವಿಚಾರವಶನಾಗಿ. ಅಷ್ಟರಲ್ಲಿ ದಂಪತಸೇಠರು ಕೆಲಸ ಮುಗಿಸಿಕೊಂಡು ಹೊರಗೆ ಬಂದರು. ಚಮನಲಾಲನನ್ನು ನೋಡಿ ಏಕೆ ಚಮನ್, ಬರತೀಯೇನು ಹಾಗಾದರೆ ಬಾ ನನ್ನ ಕಾರಿನಲ್ಲಿ" ಎಂದನು. ಚಮನಲಾಲನಿಗೆ ಹೋಗಿದ್ದ ಜೀವ ಮರಳಿದಂತಾಯಿತು. "ನಡೆಯಿರಿ ಸೇಠ" ಎಂದವನೇ ಅವರೊಡನೆ ಹೋಗಿ ಅವರ ಕಾರಿನಲ್ಲಿ ಕುಳಿತು, ಬೆವರಿದ ಮುಖವನ್ನು ಕರವಸ್ತ್ರದಿಂದ ಒರಿಸಿಕೊಂಡ. ನಿಶ್ಚಲತೆಯ ನೀಳುಸಿರೊಂದನ್ನು ಬಿಟ್ಟ. ಕಾರು ಓಡಹತ್ತಿತು ಚಮನಲಾಲನ ತಲೆಯಲ್ಲಿ ವಿಚಾರಪ್ರವಾಹ ವೆದ್ದಿತು ಇಷ್ಟು ಹಣವನ್ನು ಆತನೆಂದೂ ಎಣಿಸಿರಲಿಲ್ಲ. ಹಾಗೂ ತನ್ನ ಜೀವನದಲ್ಲಿ ಇಷ್ಟೊಂದು ಹಣ ಯಾರೂ ಕೊಟ್ಟಿರಲಿಲ್ಲ. ಅವನ ಅಣ್ಣ ಮನಹರಲಾಲಕೂಡ ಈತನನ್ನು ಹಣದ ವಿಷಯದಿಂದ ದೂರವಿಟ್ಟಿದ್ದನು. ಎಷ್ಟೆಂದರೂ ಆತನು ಗೃಹಸ್ಥ ಮೇಲಾಗಿ ಬಂಡವಲಶಾಹಿ ಆವನ ದುಡ್ಡು ದುಡಿತಲ್ಲಾ ತೊಡಗಿದರೇ ಸಮಾಧಾನ. ಹಾಳು ಕ್ಲಬ್ಬಿನಲ್ಲಿ, ಮೋಜಿಗಾಗಿ ಹಣವನ್ನೊಂದೂ ಕೊಡುತ್ತಿರಲಿಲ್ಲ ಆತ ಇದೇ ಹಣದಿಂದಲೆ ಚಮನಲಾಲ ಅವರ ಅಣ್ಣನ ಮನೋವೃತ್ತಿಯ

ವಿರುದ್ಧವಾಗಿ ತನ್ನ ಅಭ್ಯಾಸಗಳನ್ನೆಲ್ಲ ಕಲಿತು ಬಿಟ್ಟಿದ್ದ. ಆವಳಿಗೆ ಮಿಸ್-ಮಾಲಾಳ ಮೇಲೆ ಇಲ್ಲದ ಪ್ರೇಮ. ಆವಳೊಡನೆ ವಿಹರಿಸಿ ಆನಂದಪಡಯಬೇಕೆಂದೂ ಸಾಧ್ಯವಾದರೆ ಅವಳನ್ನು ಲಗ್ನವಾಗಬೇಕೆಂದೂ ಅವನ ಹೇಳುತ್ತಿದ್ದನು. ಆದರೆ ಎದೆಯಲ್ಲಿ ನೋಡಿದರೆ ಈ ವಿಶಿಷ್ಟ ಪದ್ಧತಿ ಮನೆಯಿಂದ ಎಲ್ಲಿ ಹೊರಗೆ ಹಾಕುವರೋ ಎಂಬ ಹೆದರಿಕೆ ಬೇರೆ. ಏನಾದರೂ ಆಗಲಿ ನಾನೊಂದು ಹೊಸ ಕಾರನ್ನು ಈ ದಿನವೇ ಕೊಂಡು ಬಿಡುವೆ. ರಾತ್ರಿ ರಿಜ್‌ಗೆ ಹೋಗಿ ಮಾಲಾಳೊಡನೆ ಮಾತಾಡುವೆ. ಮುಂದಿನ ಮಾತು ಮುಂದೆ ಎಂದು ಕೇಳುತ್ತ ಚಮನಲಾಲನು ಹಿಂದೆ ನೋಡಿದನು. ಅದೇ ಟ್ಯಾಕ್ಸಿ ಮುಂದಿನ ನಿಮಿಷದಲ್ಲಿ ಸೈಡುತಕ್ಕೊಂಡು ಮುಂದೆ ಹೋಯಿತು. ಚೌಕಿಗೆ ತಿರುಗಲಿಕ್ಕೆ ಸೇಠರ ಕಾರು ಸೈಡು ತಕೊಂಡು ಟ್ಯಾಕ್ಸಿಯನ್ನು ಹಿಂದೆ ಹಾಕಿತು ಚಮನಲಾಲನಿಗೆ ಇನ್ನೂ ಸಂಶಯ ಬಲವಾಯಿತು. ತನ್ನ ಹಣವೋ ಚಿಕೊಳ್ಳುವದಕ್ಕೆ ಈ ಟ್ಯಾಕ್ಸಿ ಬನ್ನು ಹತ್ತಿದೆಯೆಂದು ಹೆದರುತ್ತ ದೀಪಕ್ ಸೇಠರಿಗೆ ಹೇಳಿದನು. ಸೇಠರು ಧೈರ್ಯ ಹೇಳಿದರು. ಹಾಗೂ ಸುರಕ್ಷಿತವಾಗಿ ಅವನನ್ನು ಮನೆಗೆ ಮುಟ್ಟಿಸಿದರು.

ಚಮನಲಾಲ ಪಂಜರದಿಂದ ಹಾರಿಬಿಟ್ಟ ಹಕ್ಕಿಯಂತೆ ಒಮ್ಮೆಲೆ ಮನೆಯಲ್ಲಿ ನುಗ್ಗಿದ? ಹ್ಯಾಂಡಬ್ಯಾಗನ್ನು ತನ್ನ ರೂಮಿಗೆ ಒಯ್ದು ಕಪಾಟಿನಲ್ಲಿಟ್ಟು ಭದ್ರವಾಗಿರಿಸಿದ.

ಎರಡು ಘಂಟೆಗೆ ಮನಹರಲಾಲ ಊಟಕ್ಕೆ ಬಂದಾಗ ಚಮನಲಾಲನನ್ನು ಕರೆದು "ಏನಪ್ಪಾ ಚಮನ, ಫೇಡೆ ಎಲ್ಲಿ?" ಎಂದನು. ಚಮನನಿಗೆ ಒಮ್ಮೆಲೆ ಆಶ್ಚರ್ಯವಾಯಿತು. ಈ ಸುದ್ದಿ ಅಣ್ಣನನಿಗೆ ಹೇಗೆ ಗೊತ್ತಾಯಿತೆಂದು. ಆದರೂ ಸೈರಿಸಕುತ್ತ, "ಓಹೋ ಅದಕ್ಕೇನು. ಚಂದೂನಲ್ಲಿ ಆರ್ಡರ ಕೊಡೋಣವಲ್ಲಿ" ಎಂದನು. ಆದರೆ ಮನಹರಲಾಲನಿಗೆ ನಿಜವಾಗಿ ಫೇಡೆ ಬೇಕಾಗಿರಲಿಲ್ಲ, ಹಣ ಬೇಕಾಗಿದ್ದಿತು ಅದಕ್ಕೇ ಅದಳಿ ಹಿಂಜಿರೊಡಗಿದ ಎಷ್ಟು ಹಣ ಬಂದಿತು?

"ಏನಿಲ್ಲ, ಅಷ್ಟೇ ಅರ್ಧ ಲಕ್ಷ ಮಾತ್ರ."

"ಓಹೋ. ಹಾಗಾದರೆ ಇಬ್ಬರೂ ಪಾರ್ಟನರ ಆಗಿ ಬಿಜಿನೆಸ್ ಮಾಡೋಣವಲ್ಲ."

"ಅದೇಕೆ ಈಗ ವಿಚಾರ ಇನ್ನೂ ಇದೇ ಈಗಮನೆಗೆ ಹಣ ಬಂದಿದೆ. ನನಗೊಂದು ಕಾರು ಅವಶ್ಯವಾಗಿ ಬೇಕು. ನನ್ನ ಲಗ್ನದ ವ್ಯವಸ್ಥೆ ಮಾಡಬೇಕು. ನಾನೇನು ನನ್ನ ತಮ್ಮನ ಹಾಗೆ ಕಾಲೇಜ ಕಲಿಯಲಿಲ್ಲಾ ಅಥವಾ ನಿನ್ನ ಹಾಗೆ ಶೇರ ಆಗಲಿಲ್ಲಾ "ನೀನು ಈಗ ಒಮ್ಮಲೆ ನೇಹ ಚಮನಲಾಲ ಆಗಿಬಿಟ್ಟೆಯಲ್ಲ" "ಅದೇನು ಜೂಜಿನ ಹಣ ಕುದರೆಯ ಬಾಲದಿಂದ ಬಂದದ್ದು ಇನ್ನಾವುದರ ಬಾಲಕ್ಕೋ ಹೋಗುತ್ತದೆ ಅಷ್ಟೆ."
"ನೀವು ಹುಡುಗರು ನಿನಗೆ ಗೊತ್ತಿಲ್ಲವೇನು ಮೂರ್ಖನು ಮತ್ತು ಹಣವು ಕೂಡಲೆ ಬೇರೆ ಯಾಗುತ್ತವೆಂದು ಬಂದ ಹಣ ನಾವು ಕಾಯ್ದುಕೊಳ್ಳಬೇಕು ಸಾದ್ಯವಿದ್ದರೆ ಆದನ್ನು ಬೆಳಿಸಬೇಕು,. ತಿಳಿಯಿತೆ? ಸುಮ್ಮನೆ ಜೂಜಾಟಕ್ಕೆ ಬೀಳಬೇಡ ಈಗ ಹೋಗು. ಬ್ಯಾಂಕಿನಲ್ಲಿ ನಿನ್ನ ಅಕೌಂಟ ತೆಗೆ ಹಣ ಡಿಪಾಜಿಟ್ ಮಾಡಿ ಬಾ ಸುಮ್ಮನೆ ನಿನಗೆ ತಿಳಿಯಲಿಕ್ಕಲ್ಲ"
ಚಮನಲಾಲ ಸುಮ್ಮನೆ ಹೂಗುಟ್ಟಿ ಕೊನೆಗೊಮ್ಮೆ ನಸು-ನಕ್ಕ ಹೊರಟು ಹೋದನು ತನ್ನ ರೂಮಿಗೆ.

ಐದು ಘಂಟೆಗೆ ಜಾರ್ಜ ಬಂದಿಳದಾಗಲೇ ಚಮನಲಾಲನಿಗೆ ಎಚ್ಚರ. ಜಾರ್ಜ ಒಳಗೆ ಬಂದು ರಿಜ್‌ದಲ್ಲಿ ಟೇಬಲ್ ರಿಜರ್ವ ಮಾಡಿಸಿದ್ದನ್ನು ತಿಳಿಸಿದನು. ಚಮನಲಾಲನು "ಒಳ್ಳೇಯದು. ಇಗೊ ನಿನ್ನ ಕಮೀಶನ್" ಎಂದು ಇನ್ನೂರು ರೂಪಾಯಿಗಳನ್ನು ಕೊಟ್ಟನು. ಅವನು. ಆ ಸುದ್ದಿ ಈ ಸುದ್ದಿ ಮಾತನಾಡಿ ದೇಶಾವರಿ ನಗೆ ನಕ್ಕು ಹೊರಟು ಹೋದನು.

ನಂತರ ಚಮನಲಾಲನು ಚಹ ಕುಡಿದು ತನ್ನ ರಣಜಿತನಿಗೆ ಫೋನ ಮಾಡಿ ಆಟೋಮೊಬಾಯಿಲ್ಸಿಗೆ ಬರಬೇಕೆಂದು ತಿಳಿಸಿದ. ಅರ್ಧ ಘಂಟೆಯಲ್ಲಿ ವೇಷ ಬದಲಾಯಿಸಿ ಹೊರಟ ಪ್ರೀಮಿಯರ್ ಆಟೋಮೋಬಾಯಿಲ್ಸಿನಲ್ಲಿ ಒಂದು ಮ್ಯಾನೇಜರರ ಕಾರನ್ನು ಕೊಂಡು ಕೊಂಡು ಇಬ್ಬರೂ ಮಿತ್ರರು ನಡೆದರು. ಎಲ್ಲಿಗೆ?

# ( ೨ )

ರಣಜಿತ ಮುಂಬಯಿಯ ಸಿನಿಮಾ ಕಂಪನಿಯೊಂದರ ಫೈನಾನ್ಸರ ಅವನಿಗೆ ಎಲ್ಲ ತಾರೆಗಳ ಪರಿಚಯವೂ ಇದ್ದಿತು. ಅದಕ್ಕಾಗಿಯೇ ಚಮನ ಲಾಲ ಅವನ ಸ್ನೇಹವನ್ನು ಸಂಪಾದಿಸಿದ್ದನು. ಹಾಗು ಮಾಲಾಳೊಂದಿಗೆ ಪರಿಚಯ ಮಾಡಿಕೊಡಲು ಇವನೇ ಯೋಗ್ಯ ಮನುಷ್ಯನೆಂದು ಅವನಿಗೆ ಮನವರಿಕೆಯಾಗಿತ್ತು.

ಇಬ್ಬರೂ ಕೂಡಿ ಹೊಸ ಕಾರಿನಲ್ಲಿ ಕುಳಿತು ರಿಜ್‌ಗೆ ಬಂದರು. ಊಟ ಮುಗಿಸಿದರು. ಅಷ್ಟರಲ್ಲಿ ಬ್ಯಾಂಡವಾದನ ಸುರುವಾಯಿತು. ಗೆಳೆಯ ರಿಬ್ಬರೂ ನೃತ್ಯಬಾಲಿಗೆ ಹೋಗಿ ಸ್ಥಳವನ್ನಿರಿಸಿಕೊಂಡು ವಿಶ್ರಾಂತಿ ಪಡೆ ಯುವವರಂತೆ ಸ್ವಲ್ಪ ದೂರದಲ್ಲಿಯೇ ಸಿಗರೇಟ ಸೇದುತ್ತ ನಿಂತುಕೊಂಡರು

ಮಾಲಾಳ ನೃತ್ಯವು ವಾದಶಬ್ದ ಘ್ಲರಿಶದೊಂದಿಗೆ ಬಣ್ಣ-ಬಣ್ಣದ ವಿದ್ಯುತ ಬೆಳಕಿನಲ್ಲಿ ಸುರುವಾಯಿತು. ಚಮನ್ ಸ್ವರ್ಗ ಕಂಡ. ಅವನ ಮಿತ್ರ ರಣಜಿತ್ ಅವನಿಗೆ ಆಗಾಗ ನರ್ತಕಿಯನ್ನು ಗುರುತಿಸಲು ಹೇಳ ದಿದ್ದರೆ ಅವನು ಭೂಮಿಗಿಳಿಯುತ್ತಿದ್ದನೋ ಇಲ್ಲವೋ.

ಮೊದಲನೆ ರೌಂಡು ಮುಗಿದ ಕೂಡಲೇ ಆರೇಂಜ ಗ್ಲಾಸುಗಳು ಬಂದವು. ಚಮನಲಾಲ ಗ್ಲಾಸು ಕೈಗೆ ತೆಗೆದುಕೊಂಡು ಅಲ್ಲಿಯೇ ಇದ್ದ ಟೇಬಲಿಗೆ ಹೋಗಿ ಕುಳಿತ. ಮಾರನೆಕ್ಷಣದಲ್ಲಿ ರಣಜಿತ ಮಾಲಾಳನ್ನು ಕರೆದುಕೊಂಡು ಅದೇ ಟೇಬಲಿಗೆ ಬಂದನು. ಅವನೇ ಚಮನಲಾಲನಿಗೆ ಮಾಲಾಳ ಪರಿಚಯ ಮಾಡಿಕೊಟ್ಟ ಮೊದಲು ಗ್ಲಾಸ ಬರಿದು ಮಾಡಿ ದರು. ಚಮನಲಾಲನಿಗೆ ಇನ್ನು ಸ್ವರ್ಗವೂ ಬೇಕಾಗಿರಲಿಲ್ಲ. ಅವಳೊಡನೆ ಮಾತನಾಡಬೇಕೆಂದಿದ್ದ ಆದರೆ ನಾಲಿಗೆಯ ಮೇಲೆ ವಿಷಯವೇ ಬರಲಿಲ್ಲ.

ಅಷ್ಟರಲ್ಲಿ ಕೇರಸ್ ಬ್ಯಾಂಡ ಸುರುವಾಯ್ತು. ಎಲ್ಲರೂ ಎದ್ದುನಿಂತು ತಮ್ಮ ಜೋಡಿಗಳೊಡನೆ ದುಂಡಗೆ ತಿರುಗ ಹತ್ತಿದರು. ರಣಜಿತ ಇಷ್ಟೊ ತ್ತಿಗೆ ಎಲ್ಲೊ ಮಾಯವಾಗಿದ್ದ ಮಾಲಾಳೂ ಹೋಗಿಬಿಟ್ಟಳು ಚಮನಲಾಲ ಬೆಪ್ಪಾಗಿ ಹಳ್ಳಿಯ ಹುಂಬನಂತೆ ನಿಂತುಬಿಟ್ಟ. ಇನ್ನೇನು ಮಾಡುವದು ಎಂದು ಹಿಂದೆ ಲೌಂಜದಲ್ಲಿ ಯಾರಾದರೂ ಪಾರ್ಟನರ ಸಿಕ್ಕು ತ್ತಾರೇನೋ ಎಂದು ನೋಡಲು ಹೋದ.

ಅಲ್ಲಿದ್ದ ಒಬ್ಬ ಪಾರ್ಸಿ ಹುಡಿಗೆಯನ್ನು ರಮಿಸಿ ಕರಕೊಂಡು ಬಂದು ಮೇಳದಲ್ಲಿ ಸೇರಿದ.

ಎರಡನೇ ಕೌಂಟ ಮುಗಿಯುವ ಹೊತ್ತಿಗೆ ರಾತ್ರಿ ಹನ್ನೊಂದು ಹೊಡೆದಿತ್ತು ರಣಜಿತ ಚಮನಲಾಲನ ಬಳಿಗೆ ಬಂದು ನಾನು ಹೋಗುತ್ತೇನೆಂದು ಹೇಳಿದ. ಆದರೆ ಹೋಗಲು ಚಮನಲಾಲನಿಗೆ ಮನಸಿರಲಿಲ್ಲಿ. ಹೇಗಾದರೂ ಮಾಡಿ ಮಿಸ್‌ಮಾಲಾಳೊಡನೆ ಸಖ್ಯ ಬೆಳಿಸಿಕೊಂಡೇ ಹೋಗಬೇಕೆಂದು ಅವನ ಒಳಗಿನ ಇಚ್ಛೆ ಇದ್ದಿತು. ಆ ಮುಂಬಯಿಯ ಪತಂಗ ರಣಜಿತನಿಗೆ ಇದೇನು ಗೊತ್ತಾಗದ ಹೋಗಲಿಲ್ಲ. ಅವನೇ ಎಚ್ಚರಿಸಿದ. ಹೋಗೋಣ ನಡೆ. ನಿನ್ನ ಇಚ್ಛೆ ಪೂರ್ತಿಯಾಗದಿದ್ದರೆ ನಾಡಿದು ಶನಿವಾರ ರಾತ್ರಿ ಮತ್ತೆ ಇಲ್ಲಿಗೆ ಬರೋಣವಂತೆ. ನಾನಂತು ಹೋಗುತ್ತೇನಪ್ಪಾ ಎಂದು ಚಮನಲಾಲನ ಉತ್ತರ ಕಾಯದೇ ಹೋಗಿಬಿಟ್ಟನು.

ಕೊನೆಯ ಕಾಂಡಿನಲ್ಲಿ ಕೇವಲ ಸಂಗೀತ ವಾದ್ಯವಾದನ ವಿದ್ದಿತು. ಎಲ್ಲರೂ ಟೇಬಲ ಎದುರಿಗೆ ಪೇಯಗಳೊಂದಿಗೆ ಆ ಸ್ವರಗಳನ್ನು ಆಲಿಸುತ್ತ ಕುಳಿತ್ತಿದ್ದರು. ಚಮನಲಾಲ ಮೆನ್ಯೋಗೆ ಹೇಳಿ ಮಯೂರ ಪಂಖಳ ಸಾನ್ನಿಧ್ಯವನ್ನು ಪಡೆಯಬಯಸಿದ. ಅದೇನು ವ್ಯರ್ಥ ಹೋಗಲಿಲ್ಲ. ಮಿಸ್‌ ಮಾಲಾಳು ತನ್ನ ತಂಗಿಯೊಡನೆ ಚಮನಲಾಲನ ಟೇಬಲಿಗೆ ಬಂದು ಕುಳಿತನು

ಚಮನಲಾಲ ನ್ಹಿನುಟೊಕ್ಕೆ ಆರ್ಡರ ಕಳಿಸಿ ಸೀಗರೇಟ ಹಚ್ಚಿದ. ಪ್ಯಾಕನ್ನು ಮಿಸ್‌ಮಾಲಾಳಿದುರಿಗಿಟ್ಟ. ಅವಳು ಸೇದುವದಿಲೆಂದು ಕ್ಷಮಾಪಣೆ ಕೇಳಿದಳು. ಚಮನಲಾಲನೇ ಮಾತಿಗೆ ಮೊದಲು ಪ್ರಾರಂಭಿಸಿದ.

" ನಾನು ಕೂಡ ಸಿನೇಮಾಉದ್ಯೋಗದಲ್ಲಿ ಸೇರಬೇಕೆಂದಿದ್ದೇನೆ.

" ಹಾಗಾದರೆ ನೀವು ಕೂಡ ನಮ್ಮ ವರ್ಗದಲ್ಲಿ ಬರಬೇಕಾಯಿತಲ್ಲ

" ಏಕೋ ನಿಮ್ಮ ಪ್ರತಿಕೂಲನಿದೆಯೇ ?

" ಪ್ರತಿಕೂಲವೇನಿಲ್ಲ. ಆದರೆ ನಮ್ಮ ಸಮಾಜನ ಬಿಣ್ಣವಕಣ್ಣು ಮೇಲಿತ್ತದೆದಷ್ಟೆ

ನನಗೆ ಅರ್ಥವಾಗಲಿಲ್ಲ.

ಅದರ ಅರ್ಥವಿಷ್ಟೆ ನಾವೆಂತಹ ಉತ್ತಮ ಕಲಾವಿದರಿರಲಿ, ನಾನೆಷ್ಟು ಹಣ ಸಂಪಾದಿಸಿರಲಿ ನಮಗೆ ಸಾಮಾಜಿಕ ಸ್ವಾಥ್ಯ, ಮರ್ಯಾದೆಗಳು ಲಭಿಸುವವು.

ಅದನ್ನು ನಾನು ಒಪ್ಪಲಾರೆ. ಎಲ್ಲರೂ ಪತ್ರಿಕೆಗಳಲ್ಲಿ, ರೇಡಿಯೋ ದಲ್ಲಿ ಕ್ಲಬ್ಬುಗಳಲ್ಲಿ ಗುಣದಾನ ಮಾಡುತ್ತಾರಲ್ಲ. ಅದೇನು ಅಲ್ಪವೇ ?

ಅದು ವೇರ ಅಲ್ಪವೆಂದೇ ಹೇಳಬೇಕು. ಕ್ಲಬ್ಬುಗಳಿಗೆ ಬರುವ ಜನ ಅಷ್ಟೇ ಸಮಾಜದಲ್ಲಿ ಬಹುಸಖ್ಯಾಕರಾಗುವರು. ಅವರೇನು ಜೇಬಿನಲ್ಲಿ ಚೆಕ್‌ಪುಸ್ತಕ ಇಟ್ಟುಕೊಂಡು ಅಡ್ಡಾಡುತ್ತಾರೆ. ದಿನವೂ ಬಣ್ಣದ ರಾತ್ರಿಗಳನ್ನು ಅನುಭವಿಸುತ್ತಾರೆ. ನಾಳೆ ಶನಿವಾರ ಇಲ್ಲಿ ಫ್ಯಾಶನ್ ಪರೇಡ ನಡೆಯು ತ್ತದೆ. ಆಗ ಈ ಬೀಳಿ ಕೋಟಿನ ಕರೀಬೂಟಿನ ಜನ ಚಪ್ಪಾಳೆ ಹೊಡೆದು ಲಲ್ಲೆ ಮಾಡುತ್ತಾರೆ. ಅವರಿಗೆ ನಾವೊಂದು ಆಟಿಕೆಯ ವಸ್ತುಗಳಾಗಿ ಬಿಡುತ್ತೇವೆ. ಅಷ್ಟೇ. ಅವರಲ್ಲಿ ನಮ್ಮ ಮನಸಿನ ಇಚ್ಛೆಯೆಂದೂ ನಡೆಯಲಾರದು.

ಅದು ಬಹುಮಟ್ಟಿಗೆ ನಿಜ. ಅಶಿಕ್ಷಿತ ಸಮಾಜದಲ್ಲಿ ಈ ದೊಡ್ಡ ಜನರು ದೇವತೆಗಳಾಗಿ ವರ್ತಿಸುತ್ತಾರೆ. ಅದೆಲ್ಲ ಇರಲಿ. ನೀವೆಲ್ಲಿ ವಾಸ ವಾಗಿರುತ್ತೀರಿ.

ನಾನೇ ಮರೀನ ಡ್ರಾಯವ್ಹನಲ್ಲಿ ಇರುತ್ತೇನೆ. "ಶ್ರೀ-ನಿವಾಸ" ಎಂದು ಹೊರಗೆ ಬಿಳೀ ಕಲ್ಲಿನಲ್ಲಿ ಹೆಸರು ಹಾಕಿಸಿದ್ದೇನೆ.

"ಓಹೊ ಸುಂದರ ಹೆಸರು. ನಿಮ್ಮ ಪರಿಚಯವಾದದ್ದು. ಸಂತೋಷ ನಾಳೆ ನಿಮ್ಮನ್ನು ಭೆಟ್ಟಿಯಾಗಬಹುದೇ ?"

"ಭೆಟ್ಟಿಯಾಗುವವರೆಗೆ ನಾನು ಬೇಡವೆನ್ನಲಾರೆ. ಆದರೆ ನಾಳೆಗೆ ನನಗೆ ಕೆಲಸ ತುಂಬಾ ಇದೆ. ಬೆಳಗಿನಲ್ಲಿ ಹತ್ತುಗಂಟೆಗೆ ಒಂದು ಡಾನ್ಸಿಗಾಗಿ ಶ್ರೀ ಸೌಂಡ ಸ್ಟುಡಿಯೋಕ್ಕೆ ಹೋಗಬೇಕು ನಂತರ ಮಧ್ಯಾನ್ಹ ಐದು ಗಂಟೆಗೆ ಫಿಲ್ಮಿಸ್ತಾನ ದವರನ್ನು ಕಾಣಬೇಕು ಅವರು ಒಂದು ಕಾಂಟ್ರಾಕ್ಟ ಹೇಳಿಕಳುಹಿದ್ದಾರೆ."

"ಓಹ್. ಹಾಗಾದರೆ ನಿಮಗೂ ಬಹಳ ಎಂಗೇಜಮೆಂಟ್ಸ ಇವೇ ಇರಲಿ ಹಾಗಾದರೆ ನಾನು ಶನಿವಾರ ದಿವಸ ನಿಮ್ಮನ್ನು ಕಾಣಬಹುದೇ ?"

"ಶನಿವಾರವೇ. ನೋಡಬೇಕು ಫ್ಯಾಶನ್‌ಪರೇಡಿಗಾಗಿ ಶಾಪಿಂಗಿಗೆ ಹೋಗಬೇಕಾಗಿದೆ. ಅಷ್ಟರಲ್ಲಿ ಎಲ್ಲಿಯಾದರೂ ಹಣ ಸಂಪಾದಿಸಬೇಕು. ಈಗ ಎರಡು ದಿವಸ ಬಿಡವೇ ಇಲ್ಲ."

"ಮಿಸ್‌ಮಾಲಾ ತಪ್ಪು ತಿಳಿದು ಕೊಳ್ಳಬೇಡಿ. ಫ್ಯಾಶನ್ ಪರೇಡಿನ

ಬಗ್ಗೆ ಚಾಪಿಂಗ ನಾನು ನೋಡಿಕೊಳ್ಳುತ್ತೇನೆ. ಅದರ ಬಗ್ಗೆ ನೀವು ಚಿಂತಿಸಬೇಕಿಲ್ಲ ' ಎಂದನು.

ಮಿಸ್ ಮಾಲಾಳ ಕಂಣಲ್ಲಿ ಮೋಹಿನಿಯು ನೋಡಿ ಮೂಡಿಬಂದಿತು. ಚಮನಲಾಲ ಮಂತ್ರ ಮುಗ್ಧನಾದ.

ಹನ್ನೆರಡು ಘಂಟೆ ಬಾರಿಸಿತು ಕ್ಲಬ್ಬಿನ ದೀಪಗಳು ಆಗಹತ್ತಿದವು.

ಮಿಸ್ ಮಾಲಾಳಿಗೂ ಅವಳ ತಂಗಿಗೂ ಸುಖ ಸ್ವಪ್ನಗಳನ್ನಿಕೋರಿ ಕಾರಿನಲ್ಲಿ ಕುಳಿತು ಚಮನಲಾಲ ಮನೆಯ ಕಡೆ ಮರಳಿದ. ಅವನ ಹೃದಯ ಆನಂದದಿಂದ ಭಾರವಾಗಿತ್ತು. ಅಷ್ಟೇ ಅಲ್ಲದೆ ಪ್ರೇಮದ ಗಾಳಿ ತುಂಬಿ ಆಕಾಶದಲ್ಲಿ ಹಾರಾಡ ಹತ್ತಿತು. ನಿರ್ಜನ ಬೀದಿಗಳಲ್ಲಿ ಕಾರು ತನ್ನ ಪ್ರಖರ ದೀಪದ ಬೆಳಕಿನಲ್ಲಿ ಕತ್ತಲಿಲ್ಲಿ ಮಿಣುಕು ಹುಳದಂತೆ ಸಾಗಿತ್ತು

ಮನೆಯ ಕಂಪೌಂಡಿನಹತ್ತರ ಹೊರಳಿದೊಡನೆ ಗೇಟಿನೆದುರಿಗ ಒಂದು ಕಾರು ನಿಂತಿದ್ದು ಕಂಡು ಬಂದಿತು. ಕಾರಿನ ನಂಬರ ನೋಡಿದಾಗ ಯಾರದೆನ್ನುವದು ಗೊತ್ತಾಗಲಿಲ್ಲ ಹಾಗು ಕಂಪೌಡಿನೊಳಗೆ ಕಾರು ಏಕೆ ಯೋಗಲಿಲ್ಲವೆಂದು ಸಂಶಯ ಬಂದಿತು. ತನ್ನ ಕಾರನ್ನು ದೂಡಿಕೊಂಡು ಗೇಟಿನ ಬಳಿಗೆ ಬಂದು ಚಮನಲಾಲ ವಾಚಮನ್ ಸಮುದನನ್ನು ಕೂಗಿದನು ಉತ್ತರ ಬರಲಿಲ್ಲ. ಪುನಃ ಪುನಃ ಹಾರ್ನು ಬಾರಿಸಿದನು. ಆದರೂ ಯಾರೂ ಬರಲಿಲ್ಲ. ಒಳಗೆ ತನ್ನ ಕೋಣೆಯಲ್ಲಿ ದೀಪವಿದ್ದದು ಕಂಡು ಬಂದಿತು. ಆವನಿಗೆ ಆಶ್ಚರ್ಯವಾಯಿತು. ತಾನೇ ಗೇಟನ್ನು ತೆಗೆಯಲು ಹೋದಾಗ ಗೇಟಿನ ಚಿಲಕ ತೆಗೆದಿದ್ದು ಕಂಡು ಬಂದಿತು. ಕಾರನ್ನು ಒಳಗೆ ತೆಗೆದುಕೊಂಡು ಕಂಪೌಂಡಿನಲ್ಲಿ ಬಿಟ್ಟು ತಮ್ಮ ಸಮುದಲಾಲನನ್ನು ಕೂಗಿದನು. ಅಷ್ಟರಲ್ಲಿ ಒಮ್ಮೆಲೆ ಬೂಟಿನ ಸಪ್ಪಳ ಕೇಳಿಸಿತು. ಯಾರೋ ಕಿಟಕಿಯಿಂದ ಕೆಳಗೆ ಹಾರಿದಂತೆ ಮುಸಕು ಮುಸಕಾಗಿ ವ್ಯಕ್ತಿಯ ರೂಪ ಕಾಣಿಸಿತು. ಚಮನಲಾಲನು ಗೇಟಿನ ಕಡೆಗೆ ಹೋಗುವ ವ್ಯಕ್ತಿಯನ್ನು ತಡೆಯಲು ಓಡಿದನು. ಆದರೆ ಇವನು ಗೇಟಿಗೆ ಹೋಗುವಷ್ಟರಲ್ಲಿ ಕಾರು ಓಡಿ ಹೋಗಿದ್ದಿತು.

ಹತಾಶನಾಗಿ ಒಳಗೆ ಬಂದು ಚಮನಲಾಲನು ಮನೆಯ ಜನರನ್ನೆಲ್ಲ ಎಬ್ಬಿಸಿದನು ತನ್ನ ಕೋಣೆಯೊಳಗೆ ಹೋಗಿ ಸಮೀಪದ ಏರಿಯಾದ ಪೋಲಿಸರಿಗೆ ಫೋನ ಮಾಡಿದನು. ಕಾರಿನ ನಂಬರು ಕೊಟ್ಟನು ಕೂಡಲೇ ಬರುವದಾಗಿ ಡ್ಯೂಟಿಯ ಮೇಲಿದ್ದ ಇನ್ಸಪೆಕ್ಟರರು ಹೇಳಿದರು

ಚಮನಲಾಲನು ಕೋಣೆ ಅಸ್ತವೆಸ್ತವಾಗಿದ್ದಿತು. ಹಾಸಿಗೆ, ಮೇಜು ಅರುವೆ, ಕಪಾಟು ಎಲ್ಲವೂ ಗಡಿಬಿಡಿಯಿಂದ ಹುಡಿಕಿದಂತೆ ಆಗಿತ್ತು. ಚಮನಲಾಲನ ಹಣದ ಹ್ಯಾಂಡಬ್ಯಾಂಗ ಎಲ್ಲಿ ಎಂದು ಸಂಶಯ ಬಂದಿತು. ಎಲ್ಲಿಯೂ ಸಿಕ್ಕಲಿಲ್ಲ. ಚಮನಲಾಲನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು ತಲೆಯ ಮೇಲೆ. ನಾನು ಒಮ್ಮೆಲೆ ಭೂಮಿಗಿಳಿದ ಅನುಭವವಾಯಿತು. ಸಮದನನ್ನು ನೋಡಿದ. ಅವನಿಗೇನಾದರೂ ಗೊತ್ತಿರಬಹುದೆ? ಎಂದು ಇಡೀ ಕಂಪೌಂಡು ಹುಡಿಕಿದನು ಅಲ್ಲಿಯೇ ಕಿಟಕಿಯ ಕೆಳಗೆ ಗೇಟಿನಲ್ಲಿ ಸಮದನು ಹ್ಯಾಂಡಬ್ಯಾಗಿನೊಡನೆ ನಿಶ್ಚೇಷ್ಟಿತನಾಗಿಬಿದ್ದಿದ್ದನು ಅವನ ಮುಖವೆಲ್ಲ ಹೊಡೆತದಿಂದ ಉಬ್ಬಿ ಹೋಗಿತ್ತು ಹಲ್ಲಿನಿಂದ ರಕ್ತ ಬರುತ್ತಿತ್ತು. "ಏನು ಸಮದ್, ಏನಿದು?" ಎಂದು ಚಮನ್ ಮಾತಾಡಿಸಲು ಹೋದ "ಅಯ್ಯೋ" ಎಂದು ನರಳಿ ಸಮದ ಮಗ್ಗಲಿಗೆ ಮುಗ್ಗರಿಸಿದ ಕೂಡಲೇ ಚಮನಲಾಲನು ತನ್ನ ತಮ್ಮನನ್ನು ಕರೆದು ಇಬ್ಬರೂ ಕೂಡಿ ಸಮದನನ್ನು ಹೊತ್ತುಕೊಂಡು ವ್ಹೆರಾಂಡಕ್ಕೆ ತಂದು ಮಲಗಿಸಿದರು ಮುಖದ ಮೇಲೆ ನೀರು ಬಡಿದು ಅವನಿಗೆ ಎಚ್ಚರಗೊಳಿಸಲು ಉಪಕ್ರಮಿಸಿದರು.

ಹೊರಗೆ ಪೋಲಿಸರ ಜೀಪ್‌ಕಾರು ಬಂದಿತು. ಅದರೊಳಗಿಂದ ಇನ್ಸಪೆಕ್ಟರರು ಇಬ್ಬರು ಕಾನ್ಸಟೇಬಲರೊಡನೆ ಇಳಿದು ಒಳಗೆ ಬಂದರು. ಟಾರ್ಚಹಾಕಿ ಎಲ್ಲೆಡೆಯಲ್ಲಿಯೂ ಹುಡಕಿದರೂ ಸಮದನ ಹೇಳಿಕೆಗಾಗಿ ಅವರು ಅಲ್ಪಕಾಲ ತಡೆಯಬೇಕಾಯಿತು. ಅಲ್ಲಿಯ ವರೆಗೆ ಯಾವ ಯಾವ ಸಾಮಾನುಗಳು ಮಾಯವಾಗಿದೆಯೆಂದು ಪರೀಕ್ಷಿಸ ಹತ್ತಿದರು ಚಮನಲಾಲ ಸಮದನ ಕೈಯಲ್ಲಿದ್ದ ತನ್ನ ಹ್ಯಾಂಡಬಾಗನ್ನು ನೋಡಿದನು. ಅದು ಜಗ್ಗಾಟದಲ್ಲಿ ಅದರ ಹಿಡಿಕೆಯ ಬಾರು ಕಿತ್ತು ಹೋಗಿದ್ದಿತು. ಆದರೆ ಅದರ ಬಕ್ಕಲುಗಳು ತೆರೆಯದೆ ಇದ್ದದ್ದರಿಂದ ನೋಟುಗಳಿಗೇನೂ ಧಕ್ಕೆಯಾಗಿಲ್ಲವೆಂದು ಮನವರಿಕೆಯಾಯಿತು. ಪೋಲಿಸರ ಎದುರಿನಲ್ಲಿ ನೋಟುಗಳನ್ನು ಎಣಿಸಿದಾಗ ಅವನಿಗೆ ಸಮಾಧಾನವಾಯಿತು.

ನಿಮ್ಮ ದೈವ ನೆಟ್ಟಗಿದೆ. ಸೇಟ ಇಲ್ಲದಿದ್ದರೆ. ಹಣ ಕಳವಾದರೆ ಪತ್ತೆಯಾಗುವದು ಕಠಿಣವಿತ್ತು. ವಸ್ತು ಪಿಡೆಗಳಿದ್ದರೆ ಚಾಕ ಚಕ್ಕನೆಯಿಂದ ಹಿಡಿಯಬಹುದು. ಎಂದರು ಇನ್ಸಪೆಕ್ಟರರು.

ನಿಜ ಸಾಹೇಬರೇ ಸಮದ ಒಳ್ಳೇ ಧೈರ್ಯಸ್ಥ ನಮ್ಮ ಹಣ ಉಳಿಸಿದ. ಎಂದು ಚಮನಲಾಲ.

"ಸಮದ ಉಳಿದದ್ದೇ ಇನ್ನು ಚನ್ನಾಯಿತು ಸೇಠ. ಅವನಿಗೆ ವ್ಯಕ್ತಿಯ ಮುಖಚರ್ಯೆ ಗೊತ್ತಾಗಬಹುದು. ನೀವು ಕಾರು ನಂಬರು ನೋಡಿದ್ದುಕೊಂಡಿದ್ದುದು ಒಳ್ಳೆಯದಾಯಿತು. ನಾಳೆ ಮದ್ಯಾಹ್ನ ಹನ್ನೆರಡರ ಒಳಗೆ ಆ ಕಾರನ್ನು ಜಪ್ತ ಮಾಡಿಸುತ್ತೇನೆ. ಚಿಂತೆ ಬೇಡ.

ಅಷ್ಟರಲ್ಲಿ ಸಮದ ಎದ್ದು ಕುಳಿತು ಕಣ್ಣೊರಸಿಕೊಂಡು ಮುಖವನ್ನು ಶರ್ಟಿನಿಂದ ತಿಕ್ಕಿಕೊಂಡ. ಎದುರುಗೆ ಪೋಲಿಸರು ಸಹ ಇದ್ದುದನ್ನು ನೋಡಿ ಆಶ್ಚಯವಾಯಿತು.

ಎಲ್ಲರೂ ಚಹ ಕುಡಿದರು.

ಪೋಲಿಸಇನ್ಸಪೆಕ್ಟರು ಸಿಗರೇಟು ಸೇದುತ್ತ ಸಮದನಿಗೆ ಪ್ರಶ್ನೆ ಹಾಕ ಹತ್ತಿದರು. ಸಮದರಿಂದ ಅವರಿಗೆ ಗೊತ್ತಾದ ವಿಷಯಗಳಷ್ಟು "ಹನ್ನೊಂದುವರೆ ಗಂಟೆಯಾದ ವೇಳೆ ಅವನು ಬೀಡಿ ಸೇದುತ್ತ ಕುಳಿತುಕೊಂಡಾಗ ಹೊರಗೆ ಗೇಟಿನಲ್ಲಿ ಕಾರು ಬಂದು ನಿಂತಿತು. ಅದು ಚಮನಲಾಲರನ್ನು ಕರೆತಂದು ಕಾರಿರಬೇಕೆಂದು ಊಹಿಸಿ ಗೇಟ ತೆಗೆದೊಡನೆ ಒಬ್ಬ ವ್ಯಕ್ತಿ ಕಾರಿನಿಂದ ಹಾರಿದವನೇ ಕೈಲಿದ್ದ ಚಾಬೂಕಿನಿಂದ ನನ್ನ ಮುಖದ ಮೇಲೆ ಹೊಡೆದನು. ಒಮ್ಮೆಲೆ ಅವನ ಮೇಲೆ ಏರಿ ಹೋಗಿ ಅವನನ್ನು ಕಾರಿಗೇ ನೂಕಿ ಬಿಟ್ಟೆ. ಡ್ರಾಯವ್ಹರ ಗೇಟಿನಿಂದ ಕಂಪೌಂಡಿನೊಳಗೆ ಓಡಹತ್ತಿದ್ದ ಅದಕ್ಕಾಗಿ ಸಮದ ಒಮ್ಮೆಲೆ ಅವನನ್ನು ಬೆನ್ನಟ್ಟಬೇಕಾಯಿತು. ಆದರೆ ಹಿಂದಿದ್ದ ವ್ಯಕ್ತಿ ತಲೆಗೊಂಡು ಬಲವಾದ ಪೆಟ್ಟನ್ನು ಕೊಟ್ಟಿದ್ದರಿಂದ ಕಣ್ಣಿಗೆ ಕತ್ತಲು ಕವಿದಂತಾಯಿತು. ಒಂದೇಟು ಮಿನಿಟು ಕುಳಿತಲ್ಲಿಯೇ ಬಿದ್ದುಬಿಟ್ಟೆ ಎದ್ದು ಒಮ್ಮೆಲೆ ಗೇಟಿನೊಳಗಿಂದ ಮನೆಯೊಳಗೆ ಹೋದೆ. ಒಂದೇ ಒಂದು ಕೋಣೆಯಲ್ಲಿ ದೀಪವಿದ್ದಿತು. ಅಲ್ಲಿಗೆ ನುಗ್ಗಿದಾಗ ಒಬ್ಬನು ನೀಲಿ ಪ್ಯಾಂಟು ಹಾಕಿ ಮಾಸಿದ ಖರೇ ಶರ್ಟಹಾಕಿದನೊಬ್ಬ ಕೈಯಲ್ಲಿ ಚರ್ಮದ ಬ್ಯಾಗನ್ನು ಹಿಡಕೊಂಡು ಬಿಚಲಿಕೆ ಹತ್ತಿದ. ನಾನು ಒಮ್ಮೆಲೆ

ಅವನ ಮೇಲೆ ಹಾರಿ ಅದನ್ನು ಜಗ್ಗಿ ಕಸಿದುಕೊಂಡು ಬಿಟ್ಟೆ. ಬ್ಯಾಗು ಹರಿದು ಹೋಯಿತು. ಆ ಮನುಷ್ಯ ನನ್ನ ಮೇಲೇರಿ ಬಂದ. ಆದರೆ ಹೊರಗಿನಿಂದ ಮತ್ತೊಂದು ಕಾರಿನ ಹಾರ್ನಿನ ಸಪ್ಪಳ ಕೇಳಿಸಿತು. ಪೋ ಲೀಸರೇ ಬಂದರೆಂದು ಭಾವಿಸಿ. ಕಿಡಿಕೆಯಿಂದ ಹಾರಿದ. ನಾನು ಕೂಡ ಹಾರಿದೆ. ಆದರೆ ನಾನು ಕಾಲುತಪ್ಪಿ ಬಹಳ ಪೆಟ್ಟು ಬಿದ್ದು ವಿಶ್ಚೇಷ್ಟ ನಾಗಿ ಬಿದ್ದುಬಿಟ್ಟೆ.

## ( ೩ )

ಚಮನಲಾಲನಿಗೆ ಆ ರಾತ್ರಿ ನಿದ್ರೆಯೇ ಬರಲಿಲ್ಲ. ವಿಚಿತ್ರವಾದ ಕನಸುಗಳು ಬೀಳುತ್ತಿದ್ದವು. ಭೀಕರದಿಂದ ವಿಚಾರಗಳು ತಲೆಯಲ್ಲಿ ಸುಳಿ ಯುತ್ತಿದ್ದವು. ಒಂದರ ಮೇಲೊಂದು ಸಿಗರೇಟು ಸೇದುತ್ತಲೇ ಇದ್ದ ಕತ್ತಲೆ ಯಲ್ಲಿ ವಿಧಿ ತಂದ ವಿಧಿಯಿಂದಲೇ ಇಷ್ಟೆಲ್ಲ ಗಡಿಬಿಡಿಯಾಗಬೇಕಿತ್ತೇ ? ಮಧ್ಯಾಹ್ನದಲ್ಲಿ ತನ್ನ ಕಾರು ಬೆನ್ನು ಹತ್ತಿದ ಟ್ಯಾಕ್ಸಿಡ್ರಾಯವ್ಹರನೇ ಕಳವು ಮಾಡಲಿಕ್ಕೆ ಬಂದಿರಬಹುದೇ ? ಅಥವಾ ಇನ್ನಾರಿಗೆ ಗೊತ್ತಿದೆ ನನಗೆಸಿಕ್ಕ ಹಣ ? ಆ ಜಾರ್ಜ ಕೈಯಿಂದ ವೇನಾದರೂ ಇರಲಿಕ್ಕಿಲ್ಲವಷ್ಟೇ ?.... ಹೀಗೆ ಬಂದು ಮುಖದ ವಿಚಾರ ಪ್ರವಾಹ ಧುಮುಕುತ್ತಿದ್ದರೆ ಮತ್ತೊಂದ ಕಲ್ಪನಾ ಪ್ರವಾಹವು ಧಬಧಬಿಸುತ್ತಿತ್ತು. ಆ ಮೋಹಿನಿ ವಿಸ್‌ಮಾಲಾಳ ಸ್ನೇಹ ಆ ಸವಿನುಡಿಗಳು ಅವಳು ತನ್ನೊಡನೆ ಮದುವಿಗೆ ಒಪ್ಪಬಹುದೇ ? ಹಾಗೂ ಕೇವಲ ನಾನು ಶ್ರೀಮಂತನೆಂಬ ಗೃಹಿಕೆಯಿಂದ ನನ್ನನ್ನು ಲಗ್ನ ವಾಗುವಳೇ ?.... ... ಯಾವ ವಿಚಾರವೂ ನಿರ್ಧಾರಕ್ಕೆ ಬರಲಿಲ್ಲ. ನಿದ್ದೆಯೂ ವಾಗ ಬಂದಿತೋ.

ಬೆಳಗಿನಲ್ಲಿ ಹತ್ತು ಗಂಟೆಗೆ ಅದೇ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ಬೆಳಗಿನ ದಿನಪತ್ರಿಕೆಯ ಪುಟಗಳನ್ನು ತಿರುವಿ ಹಾಕುತ್ತ ಕುಳಿತಿದ್ದನು. ತಲೆಯಲ್ಲಿ ಕಳೆದ ರಾತ್ರಿಯ ವಿಚಾರದ ಜಾಡು ಇನ್ನೂ ಪೂರ್ಣವಾಗಿ ಹೋಗಿರಲಿಲ್ಲ ಇನ್ನೇನು ಹಾಗೆಯೇ ಆಡ್ಡಾಡಿಕೊಂಡ

ಶ್ರೀ ಸೌಂಡ ಸ್ಟುಡಿಯೋದಲ್ಲಿ ಒಳಗೆ ಹೋಗಿ ಬರಬೇಕು. ಅನಾಯಾಸವಾಗಿ ಮಿಸ್‌ಮಾಲಾಳ ದರ್ಶನಲಾಭವಾಗುತ್ತದೆ. ಎಂದುಕೊಂಡು ರಣಜಿತನಿಗೆ ಸಿದ್ಧವಾಗಲು ಫೋನ ಮಾಡಿದನು. ನಾನು ಕೂಡ ಹದಿನೈದು ನಿಮಿಷಗಳಲ್ಲಿ ಸಿದ್ಧವಾಗಿ ಕಳೆದ ಸಾಯಂಕಾಲ ಕೊಂಡುತಂದ ಕಾರಿನಲ್ಲಿ ಕುಳಿತು ಕಂಪೌಂಡು ಗೇಟು ದಾಟುವದರಲ್ಲಿದ್ದ ಅಷ್ಟರಲ್ಲಿ ಹಿಂದಿನಿಂದ ಸಮದ್ ಓಡಿಬಂದು "ಸೇಠ ಸಾಬ, ಫೋನ ಬಂದಿದೆ ತಮಗೆ" ಎಂದು ಹೇಳಿದ ಚಮನಲಾಲ ಕಾರನ್ನು ಅಲ್ಲಿಯೇ ಬಿಟ್ಟು ಒಳಕ್ಕೆ ಓಡಿದ ಫೋನಿನಲ್ಲಿ ಪೋಲಿಸ ಇನ್ಸಪೆಕ್ಟರರು ಮಾತನಾಡುತ್ತಿದ್ದರು. "ಮಹ್ಮದಲಿ ರೋಡಿನಲ್ಲಿ ಕಳೆದ ರಾತ್ರಿ ನೀವು ಹೇಳಿದ ನಂಬರಿನ ಕಾರು ಬಂದಕೂಡಲೇ ನಿಲ್ಲಿಸಿ ತನಿಖೆ ಪ್ರಾರಂಭಿಸಲಾಗಿದೆ. ಕಾರಣ ಸಮದನನ್ನು ಕರೆದುಕೊಂಡು ಕೂಡಲೇ ಕಚೇರಿಗೆ ಬರಬೇಕು." ಎಂದು ಹೇಳಿದರು.

ಚಮನಲಾಲನಿಗೆ ಪೋಲೀಸರ ಚಾಕಚಕ್ಯತೆಯ ಬಗ್ಗೆ ಆಶ್ಚರ್ಯ ಉಂಟಾಯಿತು ಹಾಗು ಅವರಿಗೆ ಸಹಾಯ ನೀಡಿದ್ದರಿಂದ ಅಭಿಮಾನವುಂಟಾಯಿತು, ಆತನು ಸಮದನನ್ನು ಕಾರಿನಲ್ಲಿ ಕೂಡ್ರಿಸಿಕೊಂಡು ಪೋಲೀಸ ಕಚೇರಿಗೆ ತೆರಳಿದನು. ಡ್ರಾಯವ್ಹರನನ್ನು ಲಾಕಪ್ಪಿನಲ್ಲಿರಿಸಿದ್ದರು. ಇವರಿಬ್ಬರೂ ಬಂದಕೂಡಲೇ ಪೋಲಿಸ ಇನ್ಸಪೆಕ್ಟರರು ಹವಾಲ್ದಾರನಿಂದ ಡ್ರಾಯವ್ಹರನನ್ನು ಕರೆತರಿಸಿದರು. ಸಮದನ ಮುಖನೋಡಿದಕೂಡಲೇ ಡ್ರಾಯವ್ಹರನು ಮುಖ ತಿರಿವಿದನು ಆದರೆ ದುರ್ದೈವಕ್ಕೆ ಸಮದನು. ಎದುರಿಗೆ ಕಾಣಿಸಬೇಕೆ? ಡ್ರಾಯವ್ಹರನು ನಿಂತಲ್ಲಿಯೇ ಕುಸಿದು ಬಿಟ್ಟನು. ತಲೆಗೆ ಕೈ ಹಚ್ಚಿಕೊಂಡು ಇನ್ಸಪೆಕ್ಟರರು ಈತನ ಚಲನವಲಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದರು. ಹಾಗೂ ಇದೇ ಡ್ರಾಯವ್ಹರನೇ ನಿಜವಾದ ಅಪರಾಧಿಯೆಂದು ಭರವಸೆ ಉಂಟಾಯಿತು. ಡ್ರಾಯವ್ಹರನು ಕೂಡ ತನ್ನ ಅಪರಾಧವನ್ನು ಅನಿವಾರ್ಯನಾಗಿ, ಅಸಹಾಯನಾಗಿ ಒಪ್ಪಿಕೊಂಡನು. ಆದರೆ ತನ್ನ ಸಹಾಯಕನ ಬಗ್ಗೆ ತುಟಿ ಬಿಚ್ಚಲಿಲ್ಲ ಮಧ್ಯಾಹ್ನ ಹನ್ನೆರಡು ಘಂಟೆಗೆ ಆ ಡ್ರಾಯವ್ಹರನನ್ನು ಪ್ರೆಸಿಡೆನ್ಸಿ ಮ್ಯಾಜಿಸ್ಟ್ರೇಟರೆದುರು ಹಾಜರು ಪಡಿಸಿದರು. ಅವನ ಮೇಲೆ ಈ ಕೆಳಗಿನ ಚಾರ್ಜ ಶೀಟ ಹಾಕಿದ್ದರು.

೧) ಮುಖನಲಾಲನೆಂಬ ಸಿಂಧಿ ಹೆಸರಿನಿಂದಿದ್ದವನು ಮರ್ದಾನಸಾಬ ಎಂದು ಮುಂಬಯಿಗೆ ಪಾಕಿಸ್ತಾನದಿಂದ ಅಕ್ರಮ ಪ್ರವೇಶಮಾಡಿದುದು.

೨) ಜಾರ್ಜ ರಾಬಿನ್ಸ ಎಂಬವರ ಹೆಸರಿನ ಡ್ರಾಯವ್ಹರಿನ ಲೈಸನ್ಸನ್ನು ಅಕ್ರಮವಾಗಿ ಇಟ್ಟುಕೊಂಡು ಟ್ಯಾಕ್ಸಿ ನಡೆಸುತ್ತಿದ್ದುದು.

೩) ಚಮನಲಾಲನ ಮನೆಯನ್ನು ಕಳವು ಮಾಡುವ ಉದ್ದೇಶದಿಂದ ಅಕ್ರಮವಾಗಿ ಪ್ರವೇಶಿದುದು

೪) ವಾಚಮನ್ ಸಮದನನ್ನು ಪ್ರಾಣಕಿಂತ ಅಪಾಯಕ್ಕೀಡ ಮಾಡಿದುದು

ಇವೆಲ್ಲವುಗಳನ್ನು ಅಪರಾಧಿಯು ಸ್ವತಃ ಒಪ್ಪಿಕೊಂಡನಂತರ ಎರಡು ವರ್ಷಗಳ ಸಶ್ರಮ ಶಿಕ್ಷೆಯುನಿರ್ಣಯವಾಯಿತು.

ಸಮುದನು ಚಮನಲಾಲನೂ ಕೂಡಿ ನೀಳುಸಿರು ಬಿಟ್ಟು ಪೋಲಿಸ ಇನ್ಸ್‌ಪೆಕ್ಟರರ ಹಸ್ತ ಲಾಘವ ಸ್ವೀಕರಿಸಿ ಮನೆಗೆ ಬರುವದಕ್ಕೆ ಎರಡು ಘಂಟೆಯಾಯಿತು.

ಚಮಲಲಾಲನಿಗೆ ಅವನ ಅಂಣ ಮನಹರಲಾಲ ವಿಚಾರಿಸಿದ "ಹಣದ ಭದ್ರತೆಯ ಬಗ್ಗೆ ಏನು ನಿಶ್ಚಯಿಸಿದೆ ಚಮನ?"

"ಏನೂ. ಇಲ್ಲ ಈಗ ಸ್ವಲ್ಪ ಖರ್ಚಿನ ಬಾಬುಗಳಿವೆ. ಅವೆಲ್ಲ ಕಳೆಯಲಿ ನಂತರ ನೀನು ಹೇಳಿದಂತೆ ಬ್ಯಾಂಕಿನಲ್ಲಿಡೋಣ ಇಲ್ಲವೆ ಬಿಜಿನೆಸನಲ್ಲಿ ತೊಡಗಿಸೋಣ"

"ನೀನು ಶತಮೂರ್ಖನಿದ್ದಿ ಯಾವಾಗಲೂ ನಗದು ಹಣವನ್ನು ಮುಂಬಯಿಯಂತಹ ಶಹರದಲ್ಲಿ ಮನೆಯಲ್ಲಿಟ್ಟುಕೊಳ್ಳುತ್ತಾರೇನು? ನಿನ್ನೆಯೆನೋ ದೇವರು ಉಳಿಸಿದ ಎಲ್ಲವೂ ಕಳವಾಗಿ ಹೋಗಿಬಿಟ್ಟದ್ದಿತೆಂದರೆ ಏನು ಮಾಡುವ ಹಾಗಿದ್ದೀ?"

"ಆಗಲಿ. ಆಗಲಿ. ಇನ್ನೆರಡು ದಿವಸ ಹೋಗಲಿ ಇಂದು ಶುಕ್ರವಾರ. ನಾಳೆ ಶನಿವಾರ. ಸೋಮವಾರ ದಿವಸ ಬ್ಯಾಂಕಿನಲ್ಲಿ ಅಕೌಂಟ ಓಪನ್ ಮಾಡಿ ನಿನಗೆ ಪಾಸಬುಕ ತೋರಿಸುತ್ತೇನೆ ಆಯಿತೇ?"

"ನನ್ನ ಉಪಹಾರದ ಸಲುವಾಗಿ ಮಾಡುತ್ತೀಯೆಂದು ಅಥವಾ ಮಾಡಬೇಕೆಂದು ನಿನ್ನ ಇಚ್ಛೆ ಇದ್ದಂತೆ ಕಂಡು ಬರುತ್ತದೆ. ನನಗೆನೂ ನಿನ್ನ ಹಣ ಬೇಕಿಲ್ಲ. ನಿನ್ನ ಹಣದ ಭದ್ರತೆಯ ದೃಷ್ಟಿಯಿಂದಲೇ ನಿನ್ನ ಅಂಣನಾಗಿ ಹೇಳುವದು."

"ಆಗಲಿ. ನಾನೆಲ್ಲಿ ನಿರಾಕರಿಸುತ್ತಿದ್ದೇನೆ ಈಗ."

"ಏನಾದರೂ ಮಾಡಿಕೊಂಡು ಹಾಳಾಗಿಹೋಗು. ನಿನಗೆ ಬುದ್ಧಿ ಹೇಳುವ ನಾನೇ ಮೂರ್ಖನು." ಎಂದು ಎದ್ದು ಹೊರಟೇ ಬಿಟ್ಟರು ಮನಹರಲಾಲನು.

ಪೀಡೆ ತೊಲಗಿತು. ಇನ್ನು ಹಾಯಾಗಿ ನಿದ್ರೆ ಮಾಡೋಣ ಕಂಣು ತುಂಬ ಎಂದು ಕೊಂಡು ಚಮನಲಾಲ ಕುಳಿತ ಸೋಪಾದಲ್ಲಿಯೆ ಒರಗಿಬಿಟ್ಟ.

ಸಾಯಂಕಾಲ ಆರು ಘಂಟೆಗೆ ಫೋನಿನಲ್ಲಿ ಘಂಟೆ ಬಾರಿಸಿದಾಗ ಸಮದ ಬಂದು ಎಬ್ಬಿಸಿದಾಗಲೇ ಚಮನಲಾಲನಿಗೆ ಎಚ್ಚರ. ಫೋನಿನಲ್ಲಿ ರಣಜಿತ ಮಾತನಾಡುತ್ತಿದ್ದ " ಮಿಸ್ ಮಾಲಾಳು ನನ್ನ ಕೆಚೇರಿಗೆ ಇನ್ನರ್ಧ ಘಂಟೆಯಲ್ಲಿ ಬರಲಿದ್ದಾಳೆ ಅವಳಿಗೇನೋ ನಿನ್ನೊಡನೆ ಮಾತನಾಡಲಿದೆ-ಯಂತೆ. ಬೇಗ ಬಾ. "

ಚಮನಲಾಲನ ಮುಖದಲ್ಲಿ ನಗೆ ಅರಳಿತು. ಒಮ್ಮೆಲೆ ಚಟುವಟಿಕೆಯಿಂದ ಬಟ್ಟೆ ಹಾಕಿಕೊಂಡವನೇ ಒಂದು ಕಟ್ಟು ನೋಟುಗಳನ್ನು ಕೋಟಿನ ಒಳ ಜೇಬಿನಲ್ಲಿ ಹಾಕಿಕೊಂಡು ಕಾರಿನಲ್ಲಿ ಕುಳಿತು ರಣಜಿತನ ಕಚೇರಿಗೆ ನಡದೇ ಬಿಟ್ಟ

ಚಮನಲಾಲ ರಣಜಿತನ ಕಚೇರಿಗೆ ಹೋದಾಗ ಮಿಸ್‌ಮಾಲಾ ಇನ್ನೂ ಬಂದಿರಲಿಲ್ಲಾ ಚಮನಲಾಲನು ಹಿಂದಿನ ದಿನದ ವ್ಯತ್ತಾಂತವನು ಸಾಧ್ಯಾಂತವಾಗಿ ವಿವರಿಸಿದ. ಅಷ್ಟರಲ್ಲಿ ಕಾರಿನ ಹಾರ್ನು ಕೇಳಿಸಿತು. ಆವಳ ತಂಗಿಯು ಒಳಗೆ ಕಚೇರಿಯಲ್ಲಿ ಬಂದು ರಣಜಿತನನ್ನು ವಿಚಾರಿಸಿದಳು. ಕೋಟಿನಲ್ಲಿ ಯಾವದೋ ಸಿನಿಮಾ ಪತ್ರಿಕೆಯನ್ನು ನೋಡುತ್ತಿದ್ದ ಚಮನಲಾಲನು ಆವಳ ದೃಷ್ಟಿಗೆ ಬಿದ್ದಿರಲಿಲ್ಲ. ಅವನು ಒಮ್ಮೆಲೆ ಎದ್ದು " ನಾನಿಲ್ಲಿಯೇ ಇದ್ದೇನೆ " ಎಂದನು. ಅವಳು ಅವನನ್ನು ರೆದ ಕೊಂಡು ಹೊರೆಗೆ ಹೋದಳು. ಮಿಸ್ ಮಾಲಾಳ ಕೂಡ ಮಾತನಾಡಿ ಅವಸರದಿಂದ ಹಿಂದೆ ಬಂದು ಚಮನಲಾಲನು " ನಂತರ ನಿನ್ನನ್ನು ಕಾಣುತ್ತೇನೆಂದು " ರಣಜಿತನಿಗೆ ಹೇಳಿ ಕಾರನ್ನು ತೆಗೆದುಕೊಂಡು ಅವಳನ್ನು ಹಿಂಬಾಲಿಸಿದನು.

' ಈವ್ಹಾನ ಫ್ರೇಜಿಸರ್ ' ಹಾಗೂ ' ವ್ಹಾಯಿಬ ಅವೇಜ ,ಗಳಿಗೆ ಕಾರುಗಳೆರಡೂ ಭೆಟ್ಟಿಕೊಟ್ಟವು. ಎಂಟು ಘಂಟೆಗೆ ಚಮನಲಾಲ ಮನೆಗೆ ಮರಳುವಾಗ ಜೇಬು ಹಗರಾಗಿದ್ದಿತು. ಆದರೆ ಮನಸ್ಸು ಭಾರವಾಗಿದ್ದಿತು ಅವನ "ತಲೆಯು ಕೂಡಾ ಭಾರವಾಗಿ ತಲೆನೋವು ಬಂದಹಾಗಿತ್ತು ಯಾವದೋ ಒಂದು ಇರಾಣಿ ಹೊಟಲಿಗೆ ನುಗ್ಗಿದ್ದೆ ಬಿಸಿ ಬಿಸಿ ಸಫೇದಾ ಚಾ ಕುಡಿದಿದ್ದೆ ಮನೆಗೆ ಬಂದು ಬಿಟ್ಟ ರಣಜಿತನಿಗೆ ಭೆಟ್ಟಿಯಾಗಲೂ ಇಲ್ಲ ಹಾಗೂ ಫೋನ ಮೂಲಕ ಹೇಳಲಿಲ್ಲ.

ಊಟವಂತೂ ವಜನವಾಯಿತು ಆ ರಾತ್ರಿ. ನಾನು ಮೂರ್ಖನಾಗತ್ತಿದ್ದೆನೆಂಬ ಸಂಶಯು ಕಾಡ ಹತ್ತಿತು ಅವನಿಗೆ. ಹಾಗು ಮಿಸ್‌ಮಾಲಾಳ

ಸ್ನೇಹದ ಬಗ್ಗೆಯು ಸಂದೇಹ ತೋರಲಾರಂಭಿಸಿತು. ತಾನೇ ಪ್ರಶ್ನಿಸಿಕೊಂಡ "ಅವಳದೆಷ್ಟು ಗರ್ವವಪ್ಪ. ತನಗೆ ಭೆಟ್ಟಿಯಾಗುವದಿದೆಯೆಂದು ನನ್ನ ಮಿತ್ರನ ಮುಖಾಂತರ ಫೋನ ಮಾಡಿಸಿ, ತಾನು ತಡನೂಡಿಬಂದು ನನ್ನ ನ್ನೇ ದಾರಿಕಾಯಿಹಚ್ಚಿದಳು. ಹಾಗೂ ಈ ಮಧ್ಯಸ್ಥನನ್ನಲ್ಲದೆ ಒಳಗೆಬಂದು ನನ್ನನ್ನು ಭೆಟ್ಟಿ ಯಾಗಲಿಲ್ಲ ತನ್ನ ತಂಗಿಯನ್ನು ಕಳಿಸಿದ್ದಳು ನೋಡಿ ಕೊಂಡು ಬರಲಿಕ್ಕೆ ಅವಾಹೋಗಲಿ ನನ್ನ ಜೇಬಿನ ರೂಪಾಯಿಗಳಿಂದಲೇ 'ಫ್ಯಾಸನ್ ಪರೇಡಿ'ಗೆ ಬೇಕಾಗುವ ವಸ್ತ್ರಒಡವೆಗಳನ್ನು ಕೊಂಡುಕೊಂಡ ಳಲ್ಲಾ. ನನ್ನನ್ನು 'ಹಣ ಕೊಡುತ್ತಿರಲ್ಲವೇ ?' ಎಂಬ ಮಾತನ್ನು ಬಿಟ್ಟು ಬೇರೇಯಾವದನ್ನಾದರೂ ತಾನು ಮಾತನಾಡಿದಳೇ ? ಇಲ್ಲ ಇಲ್ಲ, 'ನಾಳೆ ಯಾವಾಗ್ಗೆ ಭೆಟ್ಟಿಯಾಗೋಣ' ಎಂದು ಕೇಳಿದಾಗ ಕೇವಲ 'ಟಾಟಾ' ಎಂದು ಬೆರಳು ಕುಣಿಸಿ ಕಾರು ನೂಕಿಕೊಂಡು ಹೋಗಿಬಿಟ್ಟಳಲ್ಲಾ ಏನಿದರ ಅರ್ಥ ?"

ಇದು ಎರಡನೆಯ ಜಾಗರಣೆಯ ರಾತ್ರಿಯಾಯಿತ್ತು ಒಟ್ಟಿನಲ್ಲಿ ಅವನ ಚೈತನ್ಯಕ್ಕೆ ಸ್ವಾಸ್ಥ್ಯಕ್ಕೆ ಬೆಂಕಿ ತಗುಲಿತ್ತು ಅದು ಈಗಾಗಲೇ ಕೋಟಿನ ಜೇಬಿನ ವರೆಗೂ ನಿನ್ನೆ ಹಾಗೂ ಇಂದು ಆವರಿಸಿತ್ತು. ಆದರೆ ನಾಲಿಗೆ ಹೃದಯುವನ್ನೂ ಹೊಂಚುಹಾಕಿತ್ತು ಆದರೆ ಅದಿನ್ನೂ ಪೂರ್ಣವಾ ಗಿರಲಿಲ್ಲ- ಅವವೇಕದ ಕಾವು, ತಲೆಯ ಬಿಸಿ ಎಲ್ಲವೂ ಕೂಡಿ ಅವನನ್ನು ಮುತ್ತಿದವು. ಯಾವ ಕೋಕಾಕೋಲಾ ಅವನಿಗೆ ತಂಪನ್ನೀಯಲುಸಾಧ್ಯ ವಿತ್ತು, ಸಿಗರೇಟು ಮಾತ್ರ ಅವನ ಸಂಚಾರೀ ಮಿತ್ರನಾಗಿದ್ದುಕೊಂಡು ಸುಖಕಾಲದಲ್ಲಿ ಗೆಳೆಯ ನಾಗಿದ್ದಂತೆ ಅಷ್ಟಕಾಲದಲ್ಲಿ ಕೂಡ ದೂರವಾ ಗದೆ ಇನ್ನಿಷ್ಟು ಸನಿಯದ ಸ್ನೇಹಿತ ನಾಗಿದ್ದಿತು ಆದರೆ ನಿರಾಶೆಯೇ ಪರಿಣಾ ಮದ ರೂಪದಲ್ಲಿ ತೋರಹತ್ತಿದ್ದನು, ಅವನಿದುರಿಗೆ "ಹೀಗೇಕೇ ? ಮುಂ ದೇನು ?" ಇವೆರಡು ಪಶ್ನೇಗಳಿದ್ದುವು.



# ( ೪ )

ಬೆಳಗಾದೊಡನೆ ಶನಿವಾರವನ್ನು ಎದುರಿಗೆ ಗೋಡೆಯ ಮೇಲಿದ್ದ ಕ್ಯಾಲೆಂಡರ ಸೂಚಿಸಿತು. ಮೇಜಿನ ಮೇಲಿದ್ದ ಟೈಮ್ಸ ಆಫ್ ಇಂಡಿಯಾದ ಮೂರನೇ ಪುಟ ದಪ್ಪಕ್ಷರಗಳಿಂತ ರಿಜದಲ್ಲಿಯ ಫ್ಯಾಶನ್ ಪರೇಡಿಗೆ ಆವ್ಹಾನ ನೀಡಿದ್ದಿತು ಅವೆರಡರ ಪರಿಣಾಮ ಚಮನಲಾಲನ ಮೇಲೆ ಆಗದಿರಲಿಲ್ಲ. "ಈ ದಿನ ಖಂಡಿತವಾಗಿ ಮಿಸ್‌ಮಾಲಾಳನ್ನು ನೇರವಾಗಿ ಕೇಳಿ ಬಿಡುವೆ 'ನನ್ನ ನಿನ್ನ ಸಂಬಂಧ ಇನ್ನೂ ಮುಂದೆಯಾವ ರೀತಿಯಲ್ಲಿ?' ಎಂದೂ. ಹೀಗೆಯೇ ಬಣ್ಣದ ಕಾರಿಂಜಿಗೆ ಬೆನ್ನುಹತ್ತಿದರೆ ನೀರಡಿಕೆ ಹೋಗಲಾರದು. ಇನ್ನೇನು ರಣಜಿತನ ಮಧ್ಯಸ್ತಿಕೆ ಬೇಡ" ಎಂದುಕೊಂಡು ಫೋನಿನಿಂದ ರಿಜನಲ್ಲಿ ಟೇಬಲಿಗೆ ರಿಜರ್ವೇಶನ್ ಆರ್ಡರ ಕೊಟ್ಟನು. ಫೋನು ಕೆಳಗಿಟ್ಟಾಗ ಇದೂ ಒಂದು ಡರ್ಬಿ ಲಾಬರಿಯೇ ಎಂದೆನಿಸುತ್ತದೆ ಎಂದುಕೊಂಡನು.

ಸಾಯಂಕಾಲ ಯಥಾಪ್ರಕಾರ ಶೃಂಗರಿಸಿಕೊಂಡು ಮತ್ತೊಂದು ನೋಟಿನ ಕಟ್ಟನ್ನು ಜೇಬಿನಲ್ಲಿಟ್ಟುಕೊಂಡು ರಿಜಿಗೆ ನಡೆದನು.

ಊಟದ ನಂತರ ವಿಯೇಲಿನದ ಕಾರ್ಯಕ್ರಮವಾಯಿತು. ನಂತರ ಒಂದೆರಡು ರೌಂಡು ನೃತ್ಯಗಳಾದವು. ಆದರೆ ಚಮನಲಾಲನು ಎಲ್ಲಿಲ್ಲದ ಗಂಭೀರ್ಯವನ್ನು ಮುಖದ ಮೇಲೆ ತಂದುಕೊಂಡು ಟೇಬಲು ಎದುರಿಗೆ ಒಬ್ಬನೇ ಒಂದಾದ ನಂತರ ಒಂದು ಗ್ಲಾಸು ಪೇಯ ಕುಡಿಯುತ್ತ, ಸಿಗರೇಟು ಸೇದುತ್ತ ಕುಳಿತ್ತಿದ್ದನು. ಒಬ್ಬಬ್ಬ ಯುವತಿಯರು ನೃತ್ಯಕ್ಕೆ ಕರೆದರೂ ಕ್ಷಮೇಕೋರಿಕೊಂಡು ದೂರುಸರಿದುಬಿಟ್ಟ. ಇಲ್ಲಿಯವರೆಗೆ ನಡೆದ ನೃತ್ಯಗಳಲಿ ಅವಳ ದರ್ಶನವೇ ಸಿಗಲಿಲ್ಲ. ಅವಳೇನು ಬಂದಾಳಿ ಇಲ್ಲವೋ ಎಂಬ ಸಂಶಯುವು ಬಂದಿತು.

ಆದರೆ ಆ ಅಂಧಕಾರದಲ್ಲಿ ಬಿಳಿಮೋಡತೇಲಿತು 'ಲಪ್ಲಿ ಬು ಲುಕ್ ಆ್ಯಟ್' ಎಂದು ಬಣ್ಣಬಣ್ಣದ ಲೈಟುಗಳು ಒಮ್ಮೆಲೆ ಹತ್ತಿಕೊಂಡವು.

ರಂಗದ ಮೇಲೆ ಮೆಸ್ಟ್ರೋದೊಡ್ಡ ಕರ್ಕಶದನಿಯಲ್ಲಿ ಪಾತ್ರವರ್ಗದ ಹೆಸರುಗಳ ಪಟ್ಟಿಯನ್ನು ಓದುತ್ತಿದ್ದನು ಪ್ರತಿಯೊಂದ ಹೆಸರನ್ನು ಉತ್ಸಕನಾಗಿ ಚಮನಲಾಲ ಕೇಳುತ್ತಿದ್ದನು. ಮೇಸ್ಟ್ರೋ ಕೊನೆಗೆ "ಮತ್ತು ಮಿಸ್‌ಮಾಲಾ" ಎಂದು ಓದಿ ಮುಗಿಸಿದಾಗ ಮನಸಿನ ಭಾರವಿಳಿದಂತಾಯಿತು ಚಮನಲಾಲನಿಗೆ.

ವಿವಿಧ ವೇಷಧರಿಸಿದ ಹುಡಿಗೆಯರ ಪರೇಡು ಸಾಗಿತ್ತು ಪ್ರೇಕ್ಷಕರ ಟೇಬಲುಗಳಿಂದ ಹರ್ಷೋದ್ಗಾರಗಳೂ ಅಭಿನಂದನೆಗಳು ಕೇಳಬರುತ್ತಿದ್ದವು. ಕೊನೆಗೆ ಮಿಸ್‌ಮಾಲಾ ರಂಗದ ಮೇಲೆ ಬಂದಾಗ ಎಲ್ಲ ಕೆಮರಾಗಳು ಒಮ್ಮೆಲೆ ಕ್ಲಿಕ್ ಎಂದವು. ಚಮನಲಾಲ ಎದ್ದವನೇ 'ವಂಡರಫುಲ್' ಎಂದು ಅರವಿಲ್ಲದೇ ಕೂಗಿಬಿಟ್ಟ. ಇವನ ಸ್ವರ ಕೇಳಿ ಎಲ್ಲರೂ ಇವನನ್ನೇ ನೋಡಿದರು. ಲೆಂಜಿನಲ್ಲಿಯ ಹುಡಿಗೆಯರು ಪರದೆಸರಿಸಿ ಈ ವಿಶಿಷ್ಟ ವ್ಯಕ್ತಿಯನ್ನು ನೋಡಿ ಗಹಗಹಿಸಿ ನಕ್ಕರು ಆದರೆ ಮಿಸ್‌ಮಾಲಾಳ ಮುಖ ಬಾಡಿ ಹೋಯಿತು. ಅವಳಿಗೆ ಶೃಂಗಾರ ಆಸ್ವಾದನ ಧನ್ಯವಾದಗಳು ಬೇಕಾಗಿದ್ದರೂ ಈ ರೀತಿ ಹುಂಬನಂತೆ ಒಬ್ಬನೇ ಎದ್ದುಕೂಗಿಕೊಂಡುದು ಬೇಕಾಗಿರಲಿಲ್ಲ. ಇತರರು ಕೇವಲ ಚಪ್ಪಾಳೆ ತಟ್ಟಿ ಆನಂದ ವ್ಯಕ್ತಮಾಡುತ್ತಿದ್ದಾಗ ಈ ಏರಧ್ವನಿಯ ಪ್ರತಿಕ್ರಿಯೆ ಬೇರೆ ರೂಪದಲ್ಲಿಯಾಯಿತು. ಅವಳ ಮನಸಿನ ಮೇಲೆ ಗಾಯವಾದಂತಾಯಿತು. ಕಾರ್ಯಕ್ರಮದ ನಂತರ ಅವನಿಗೆ ಸಂದರ್ಶನವನ್ನು ಕೂಡ ಕೊಡಲಿಲ್ಲ ಆಕೆ.

ಅಯ್ಯೋ ಚಮನಲಾಲನ ಹಣೆಬರೆಹವೇ, ಸುಸ್ತಾಗಿ ಕಾರನ್ನು ಮೆಲ್ಲಗೆ ತಳ್ಳಿಕೊಂಡು ರಾತ್ರಿ ಒಂದು ಘಂಟೆಗೆ ಮನೆಯನ್ನು ಮುಟ್ಟಿದ. ಸಮುದ ಯೋಗ ಕ್ಷೇಮ ವಿಚಾರಿಸಿದರೂ ಉತ್ತರ ಕೊಡುವ ಪರಿಸ್ಥಿತಿಯಲ್ಲಿರಲಿಲ್ಲ ಚಮನಲಾಲ ಹೋದವನೇ ರೂಮಿನಲ್ಲಿ ಬೂಟ್ಸ ಕಳೆದು, ಬಟ್ಟೆ ಬದಲಾಯಿಸಿದೆ ಸೋಫಾದಲ್ಲಿ ಬಿದ್ದುಕೊಂಡ. ಕತ್ತಲಿಯಲ್ಲಿ ವಿಚಾರಗಳು ಮತ್ತೆ ಕಾಲುಗಳನ್ನುರಿಚಿಸಿಕೊಂಡು ಭೂತಗಳಂತೆ ಅವನನ್ನು ಪೀಡಿಸ ಹತ್ತಿದವು ಸಿಗರೇಟು ಸುಟ್ಟಿದ್ದು ಆ ರಾತ್ರಿಯಲ್ಲಿ ಲೆಕ್ಕವೇ ಇಲ್ಲ ಅವನ ಹೃದಯದಿಂದ ಅವಳ ಬಗೆಗೆ ಪ್ರೇಮರಸ ಉಕ್ಕೇರಿ ಬರುತ್ತಿರಲ್ಲಿಲ್ಲ ಕುತ್ತಿಗೆಯನ್ನು ಹಿಸಕಲುದ್ಯಕ್ತವಾಗಿದ್ದವು. ಅವನ ತಲೆಯಲ್ಲಿ ಶಾಂತಿ ಇರಲಿಲ್ಲ ಭ್ರಮೆ ತುಂಬಿ ಬಿಟ್ಟಿದ್ದಿತು.

( ೫ )

ಗುರುವಾರ, ಶುಕ್ರವಾರ, ಶನಿವಾರಗಳಂತೆಯೇ ಆದಿತ್ಯವಾರವೂ ಬೆಳಗಾಗಿತ್ತು. ಆದರೆ ಚಮನಲಾಲನಿಗಿನ್ನು ಆದಿತ್ಯವಾರ ಬಂದಿರಲಿಲ್ಲ. ಅವನ ಮನಸಿನಲ್ಲಿ ಉಲ್ಲಾಸದ ಸೂರ್ಯೋದಯವಾಗಿರಲಿಲ್ಲ. ಶನಿವಾರವೇ, ಇನ್ನೂ ತಲೆಯಲ್ಲಿ ಪೂರ್ಣಸಂಚರಿಸಿದ್ದಿತು. ಕ್ಯಾಲೆಂಡರು ಮಾತ್ರ ಇವ ನತ್ತ ಲಕ್ಷ್ಯಕೊಡದೆ ಇಂದು ನಿಜವಾಗಿಯೂ ಆದಿತ್ಯವಾರ ಎಂದು ತಿಳಿಸು ತ್ತಿತ್ತು ಹಾಗೂ ಕೆಂಪು ವರ್ಣದಿಂದ ಆ ದಿವಸಕ್ಕೆ ಹಾಗೂ ದಿನಾಂಕಕ್ಕೆ ವಿಶೇಷ ಕಳೆ ಬಂದಿದ್ದಿತು. ಶಾಲಾ ಹುಡುಗರಿಗೆ, ಕೆಲಸಗಾರರಿಗೆ ಅದು, ಆನಂದದ ದಿನವಾದರೂ ಚಮನಲಾಲನಿಗೆ ಆ ಕೆಂಪು ರಕ್ತದಂತೆ ತೋರಿತು. ಒಂಬತ್ತು ಘಂಟೆಯಾದಾಗ ಫೋನಿನಲ್ಲಿ ರತನ ಮಾತನಾಡು ತ್ತಿದ್ದ ತನ್ನ ಮನೆಯಿಂದ "ರಾಯಲ್ ಓಪೇರಾಕ್ಕೆ ಒಂಬತ್ತು ಮುಕ್ಕಾಲು ಘಂಟೆಗೆ ಬಾ ಪೃಥ್ವೀರಾಜನ ಹೊಸನಾಟಕ ಪ್ರಥಮ ಪ್ರಯೋವದೆ. ಅದರ ಹೆಸರು 'ಆಹುತಿ, ಯಂತೆ ಈಗಾಗಲೇ ಎರಡು ಸೀಟುಗಳು ನಮ್ಮಿ ಬ್ಬರಿಗೆ ರಿಜರ್ವ್ಹ ಆಗಿವೆ."

ಚಮನಲಾಲನು ರಾತ್ರಿಯು ಗಣಿತ ಗಾಳಿಗೆ ಹೋಯಿತು. ಮಿಸ್ ಮಾಲಾಳ ಆಹುತಿಯ ಬದಲು ನಾಟಕದ ಆಹುತಿ ನೋಡಬೇಕು. ನಾ ಯಕನ ಪಾತ್ರವಹಿಸುವದರ ಬದಲು ಪ್ರೇಕ್ಷಕನ ಪಾತ್ರ ವಹಿಸಬೇಕು. ಜೀವನದ ವಿಚಿತ್ರ ಸನ್ನಿವೇಶವೆಂದುಕೊಂಡ. ಆಗಿದ್ದಾಗಲಿ ಹಣದೊಕ್ಕಿ ಯೊಂದು ನನ್ನ ಜುಟ್ಟನ್ನಲ್ಲಾಡಿಸುತ್ತದೆ. ನಾನು ಕೇವಲ ಆಟದ ಬೊಂ ಬೆಯಂತೆ, ಸೂತ್ರಧಾರನ ಇಚ್ಛೆಯಂತೆ, ಆಜ್ಞೆಯಂತೆ ಚಲಿಸುತ್ತಿದ್ದೇನೆ. ಎಂದು ಇನ್ನೂ ಏನೇನೋ ವಿಚಾರಿಸಿಕೊಳ್ಳುತ್ತ ಹ್ಯಾಮ್ಲೆಟನಂತೆ ಮನೆಯ ಒಳಗೆ ಹೊರಗೆ ಉದ್ದೇಶರಹಿತನಾಗಿ ಓಡಾಡಿದ. ಕೊನೆಗೊಮ್ಮೆ ಏನೇನೋ ಸ್ಥಿಮಿತಕ್ಕೆ ಬಂದು ಸೂಟು ಧರಿಸಿ ಟೇಬಲುಃಡ್ರಾಗಳೆನ್ನೆಲ್ಲ ಕಿತ್ತು ಹಾಕಿ ಕೆಲ ನೋಟು ಕಟ್ಟು ಗಳನ್ನು ಜೇಬಿಗೆ ಸೇರಿಸಿಮಿಸ್ ಮಾಲಾಳು ಎಲ್ಲಿಯಾದರೂ ಸಿಕ್ಕರೆ, ಇರಲಿ ನೋಡೋಣವೆಂದುಒಂದು ಚೂರಿ ಕೂಡಾ ಹಾಕಿಕೊಂಡ ಜೇಬಿನಲ್ಲಿ.

ಇಬ್ಬರೂ ಮಿತ್ರರೂ ಕೂಡಿ 'ಆಹುತಿ' ನಾಟಕವನ್ನು ನೋಡಿ ಸಂತೋಷ ಪಟ್ಟಿರಬೇಕು ನಾಟಕವು ನಡೆದಾಗ ·ರಣಜಿತನ ಮುಖ ಆನಂದದಿಂದು ಕಳೆಗೂಡಿತ್ತು ಚಮನಲಾಲನ ಮುಖ ಕರ್ತವ್ಯದ ಕರೆಯಿಂದ ಕೆಂಪೇರಿತ್ತು.

ಆದಿತ್ಯವಾರವೆಂದರೆ ಸರಕಾರಿ ಕೆಲಸದಲ್ಲಿದ್ದವರಿಗೆ ಒಂದು ಆನಂದದ ದಿನವೆಂದೇ ಹೇಳಬೇಕು ಯಾಕಂದರೆ ಆ ದಿನ ಮಾತ್ರ ಅವರು ಹೆಂಡಿರು ಮಕ್ಕಳ ಮುಖ್ಯವನ್ನು ಸಖವನ್ನು ಸೂರ್ಯನ ಬೆಳಕಿನಲಿ ಕಾಣುತ್ತಾರೆ. ಸ್ಪೇಶಲ್ ಕ್ರೈಮ್ ಬ್ರಾಂಚದ ಇನ್ಸಪೆಕ್ಟರ ಸಿಂಗ್ ಕೂಡಾ ಮುಂಜಾನೆ ಮೆಟ್ರೊ ಮ್ಯಾಟನಿ ಸಿನಿಮಾ ನೋಡಿ ನಂತರ ಸುಗ್ರಾಸಭೋಜನ ಮುಗಿಸಿ ಮಲಗಿದ್ದರು, ನಿಶ್ಚಿಂತಿಯಿಂದ. ನಾಲ್ಕು ಘಂಟೆಗೆ ಎದ್ದು ಮಕ್ಕಳೊಂದಿಗೆ ಚಹ ಕುಡಿಯುತ್ತ ರೇಡಿಯೋ ತಿರಿಗಿಸುತ್ತ: ಕುಳಿತಾಗ ಟೆಲಿಫೋನ ಬಂದಿತು, ಪೊಲೀಸ ಕಚೇರಿಯಿಂದ ಅಲ್ಲಿ ಹವಾಲ್ದಾರನೊಬ್ಬ ಮಾತನಾಡುತ್ತಿದ್ದ ಒಬ್ಬ ಯವತಿ ಬಂದಿದ್ದಾಳೆ ಕೊಲೆಯ ಬಗ್ಗೆ ಫಿರ್ಯಾದಿ ದಾಖಲು ಮಾಡಲಿಕ್ಕೆ ಬಂದಿದ್ದಾಳಂತೆ ಕೇಳುತ್ತೀರಾ ?" ಸಿಂಗ ಹೇಳಿದರು. ಅವಳನ್ನೇ ಫೋನ ಮೇಲೆ ಕರೆಯಿರಿ. ಸಿಂಗರು ತಮ್ಮ ಲೆಟರ ಪ್ಯಾಡ ಕೈಗೆ ತಕೊಂಡು ಯವತಿ ಹೇಳಿದ ವಿವರಗಳನ್ನೆಲ್ಲ ಬರೆದುಕೊಂಡರು ನಂತರ ಹವಾಲ್ದಾರನಿಗೆ ಇಬ್ಬರು ಸೆಂಟ್ರಿ ಕೈಗುರ್ತು ಹಿಡಿಯುವವರು ಒಬ್ಬರು, ಸ್ಟಾಫ ಫೋಟೋಗ್ರಾಫರು ಒಬ್ಬರು, ಹಾಗು ಒಂದಿಬ್ಬರು ಜಮಾದಾರರನ್ನು ಪೋಲಿಸಲಾರಿಯೊಂದಿಗೆ ಯವತಿಯೊಡನೆ ಕಳಿಸಿ ಕೊಡಿರಿ. ಮನೆಯ ಆವಾರದಲ್ಲಿ ನಾನು ಬರುವವರೆಗೆ ಯಾರನ್ನು ಒಳಗೆ ಬಿಡಬೇಡಿರಿ. ನಾನೀಗ ಬಂದೆ ಎಂದವರೇ ಸೂಟುಧರಿಸಿಕೊಂಡು ತಮ್ಮ ಜೀಪಿನಲ್ಲಿ ಹೊರಟೇ ಬಿಟ್ಟರು.

ಎಲ್ಲಿಗೆ ?

ಕೊಲೆಯಾದ ಸ್ಥಳ ಆ ಯುವತಿಯು ಹೇಳಿದ ವಿಳಾಸವನ್ನು ಗುರುತಿಸಿಕೊಂಡು 'ಶ್ರೀ ನಿವಾಸ'ಕ್ಕೆ ಬಂದಿಳಿದರು. ಪೋಲಿಸಸಿಬ್ಬಂದಿಯು ಅವರಿಗೆ 'ಸೆಲ್ಯೂಟ'ಮಾಡಿ ಸರಿದು ನಿಂತಿತು.

ಅಲ್ಲಿದ್ದ ಚಿತ್ರದ ಕಸದ ಬುಟ್ಟಿಯನ್ನು ತೆಗೆದುಕೊಂಡು ಎದುರಿಗೆ ಸುರುವಿ ಕೊಂಡು ಅದರಲ್ಲಿರುವ ಪ್ರತಿಯೊಂದು ವಸ್ತುವನ್ನು ಪರಶೀಲಿಸತೊಡಗಿದ ರು. ಅವರಿಗೆ ಬೇಕಾಗುವ ಯಾವ ಸಾಕ್ಷಿಯೂ ಸಿಗುವಂತೆ ತೋರಲಿಲ್ಲ ಅದರೂ ಅಲ್ಲೊಂದು ಸೀಸೆಯ ತಗಡಿನ ಮುಚ್ಚಳ ಕಾಣಿಸಿತು. ಅದರ ಮೇಲೆ ಜಿನ್ ಪೇಹದ ಲೇಬಲ್ ಇದ್ದಿತು. ಇನ್ಸಪೆಕ್ಟರರ ತರ್ಕವು ಕೂಡಲೆ ಕುದರೆಯನ್ನು ಏರಿತು. ಈ ಮನೆಯಲ್ಲಿ ಯಾರಾದರೂ ಜಿನ್ ಶೇವಿಸುತ್ತಿದ್ದಾ ರೆಯೋ ಅಥವಾ ಸೇವಿಸುತ್ತಿತ್ತಾರೆ. ಈ ತಗಡಿನ ಮುಚ್ಚಳವು ಅತಿ ಹೊ ಸದಿರುವದರಿಂದ ಹಾಗೂ ವಾಸನೆ ಇನ್ನೂ ಅಡಗಿರುವದರಿಂದ ಯಾರೋ ಇಲ್ಲಿ ಇದೇ ದಿನ ಇದೇ ಸ್ಥಳದಲ್ಲಿ ಜಿನ್ ಕುಡಿದಿರಬೇಕು ಎಂದರು ಕೂ ಡಲೆ ಮನೆಯಲ್ಲಿನ ಎಲ್ಲ ಗ್ಲಾಸಗಳನ್ನು ತರಿಸಿ ವಾಸನೆ ನೋಡಿದರು ಏನೂ ವಿಶೇಷವಾಗಿ ಕಾಣಲಿಲ್ಲ ಆದರೂ ಆ ಜಿನ್ ಸೀಸೆಯ ಲೇಬಲುಳ್ಳ ಮು ಚ್ಚಳವನ್ನು ಕಿಸಿಗೆ ಸೇರಿಸಿದರು.

ಅಷ್ಟರಲ್ಲಿ ಪ್ರೆಸಿಡೆನ್ಸಿ ಸರ್ಜನರು ಮರಣವು ನಡೆದು ಸುಮಾರು ಐದು ಘಂಟೆಗಳಾಗಿರಬೇಕೆಂದು ಅಭಿಪ್ರಾಯ ಕಳಿಸಿದರು ಶವವನ್ನು ಮ ರಳಿ ಒಪ್ಪಿಸುವ ಮೊದಲು ಸಿಂಗರು ಮೃತಳ ತಂಗಿಯನ್ನು ವಿಚಾರಿಸಿದರು

ಅವಳೇ ಪೋಲಿಸ ಕಚೇರಿಗೆ ಹೋಗಿ ವರದಿ ಮಾಡಿದ್ದಳು. ಅವಳ ಹೇಳಿಕೆಯ ಅಂಶಗಳಿಷ್ಟು. ನಾನು ಮಿತ್ರರೊಡನೆ ಊಟ ಮಾಡಿ ಮನೆಗೆ ಎರಡೂ ವರೆ ಘಂಟೆಯ ಸುಮಾರಿಗೆ ಬಂದೆ. ಬಂದವಳೇ ಆಲಸ್ಯ ದಿಂದ ನನ್ನ ಕೋಣೆಗೆ ಹೋಗಿ ಮಲಗಿಕೊಂಡೆ ನಾನು ಮುಖ್ಯ ಬಾಗಿಲಿ ನಿಂದ ಹೋಗಲಿಲ್ಲ ಯಾಕಂದರೆ ನಾನು ತಂದ ಕಾರು ಸ್ಪೈಡಿಗೆ ತಂದು ನಿಲ್ಲಿಸಲ್ಪಟ್ಟದ್ದರಿಂದ ನಾನು ಇನ್ನೊಂದು ಬಾಗಿಲಿನಿಂದ ಮನೆ ಸೇರಿ ಮ ಲಗಿಕೊಂಡಿದ್ದೆ ಸುಮಾರು ಮೂರುವರೆ ಘಂಟೆಯಾಗಿರಬೇಕು. ಫೋನಿನ ಬೆಲ್ಲ ಬಿಟ್ಟೂ ಬಿಡದೆ ಬಾರಿಸಹತ್ತಿತು. ನಾನು ಎದ್ದು ಹೋದೆ. ಹೋದ ವಳೇ ನನ್ನ ಅಕ್ಕನ ಶವವನ್ನು ನೋಡಿ ಚೀರಿಕೊಂಡೆ. ಟೆಲಿಫೋನಿಗೆಲ್ಲಿನ ಕೊಡಲೇ ಇಲ್ಲ.

ದಿವಾಣಖಾನೆಯನ್ನು ಎರಡು ಮೂರು ಸಲ ದೃಷ್ಟಿಸಿದೆ ರಕ್ತ ಮಯ ದೇಹವನ್ನು ಕಂಡು ತುಂಬಾ ಹೆದರಿದೆ. ಕೂಡಲೇ ಕಾರನ್ನು ತೆಗೆದುಕೊಂಡು ಹೋಗಿ ಪೋಲೀಸ ಕಚೇರಿಗೆ ವರದಿಕೊಟ್ಟೆ.

ಪೋಲೀಸ ಇನ್ಸಪೆಕ್ಟರ ಸಿಂಗರು "ಅದಿರಲಿ. ನಿಮ್ಮ ಮನೆಯಲ್ಲಿ ಮತ್ತೆ ಎಷ್ಟು ಜನ ಇರುತ್ತೀರಿ. ಡ್ರಾಯವ್ಹರ ಒಬ್ಬನು ಇರಬೇಕಲ್ಲವೆ? ವಾಚಮನ್ ಇರಬೇಕಲ್ಲವೆ ? ಕುಕ್ ಇರಬೇಕಲ್ಲವೆ ? ಯಾರೂಕಾಣುವದಿಲ್ಲ ಎಲ್ಲಿ ? " ಎಂದು ಪ್ರಶ್ನಿಸಿದರು. ಅದಕ್ಕೆ ಆ ಯುವತಿಯು "ನಮಗಿಬ್ಬರಿಗೂ ಸ್ವಂತ ಡ್ರಾಯವಿಂಗ ಲಾಯಸೆನ್ಸ ಇದ್ದುದರಿಂದ ನಾವು ಯಾವ ಡ್ರಾಯವ್ಹರನನ್ನೂ ನೇಮಿಸಿಲ್ಲ ಕ್ಲಿನಿಂಗಿಗೆ ಮಾತ್ರ ಮೋಟಾರ ಗ್ಯಾರೇಜಿಗೆ ಹೋಗುತ್ತಿದ್ದೆವು. ವಾಚಮನ್ ಒಬ್ಬನಿದ್ದಾನೆ. ಅವನ ಹೆಸರು ರಜಾಕ. ಅವನು ನಾನು ಬಂದೊಡನೆಯೇ ಮಾತುಂಗಕ್ಕೆ ಹೋಗಿ ಬರುತ್ತೇನೆಂದು ಹೇಳಿ ಹೋಗಿದ್ದಾನೆ. ಆರು ಘಂಟೆಗೆ ಬರಬಹುದು ಕುಕ್ ಒಬ ಹೆಂಣು ಮಗಳಿದ್ದಾಳೆ ಅವಳ ಹೆಸರು ನೂರ್ ಎಂದು. ನಾನವಳನ್ನು ಮುಂಜಾನೆ ಹನ್ನೊಂದರ ನಂತರ ಭೆಟ್ಟಿಯಾಗಿಲ್ಲ ರಜತನಿಗೂ ನಾನವಳ ಬಗ್ಗೆ ಕೇಳಲಿಲ್ಲ" ಎಂದುತ್ತರಿಸಿದಳು..

"ಹಾಗಾದರೆ ನೀವು ಪೋಲೀಸ -ಸ್ಟೇಶನಿಗೆ ಬರುವಾಗ ಶವವನ್ನು ಯಾರು ಕಾಯುತ್ತಿದ್ದರು ? " ಎಂದು ಸಿಂಗ ಪ್ರಶ್ನೆ ಹಾಕಿದರು.

"ಯಾರೂ ಇರಲಿಲ್ಲ. ನಾನೇ ಕೀಲಿ ಭದ್ರವಾಗಿ ಹಾಕಿಕೊಂಡು ಬಂದಿದ್ದೇನೆ. ಹಾಗೂ ನಿಮ್ಮೆಲ್ಲರೆದುರಿಗೇನೆ ನಾನು ಕೀಲಿ ತೆಗೆದಿದ್ದೇನೆ." ಎಂದಳು.

"ನಿಮ್ಮ ಹೆಸರನ್ನೇ ನಾನು ಕೇಳಲಿಲ್ಲ" ಎಂದರು ಸಿಂಗ.

"ನನ್ನ ಹೆಸರು ಸೋಫಿಯಾ ಎಂದು" ಎಂದಳು ಯುವತಿ.

"ಸರಿ ಮಿಸ್ ಸೋಫಿಯಾ, ನಮ್ಮ ಮನೆಯಲ್ಲಿಯೇ ಫೋನ ಇದ್ದರೂ ಸಹ ಮನೆಕೀಲಿ ಹಾಕಿಕೊಂಡು ಪೋಲಿಸ ಕಚೇರಿಯ ವರೆಗೆ ಸ್ವತಃ ಬಂದು ಹೇಳುವ ಉದ್ದೇಶವೇನಿತ್ತು ?" ಸಿಂಗ ಮೂಲಪ್ರಶ್ನೆ ಹಾಕಿದರು.

"ಅದೇ ಹೇಳಿದೆನಲ್ಲ ಸಾಹೇಬರೇ. ನನಗೆ ವ್ಯವಧಾನವೇ ಉಳಿಯಲಿಲ್ಲಿ"

"ನೀವು ಬೆಳಗಿನಿಂದ ಎಷ್ಟು ಹೊತ್ತಿನವರೆಗೆ ಮನೆಯಲ್ಲಿದ್ದಿರಿ?" ಎಂದು ಕೇಳಿ ಕಿಸೆಯಲ್ಲಿಂದ ಒಂದು ಫುಲ್‌ಶೀಟ ಬಿಳೀಕಾಗದವನ್ನು ತೆಗೆದುಕೊಂಡು ಪೆನ್ನು ತೆಗೆದು ಬರೆದುಕೊಳ್ಳಲು ಪಕ್ರಮಿಸಿದರು ಸಿಂಗ

ನಾನು ಹನ್ನೊಂದು ಘಂಟೆಯುವರೆಗೆ ಮನೆಯಲ್ಲಿದ್ದೆ "

" ಆ ವೇಳೆಯಲ್ಲಿ ನಿಮ್ಮಅಕ್ಕ ಮನೆಯಲ್ಲಿಯೇ ಇದ್ದಳೇ ?"

" ಅವಳು ನಿನ್ನೆ ರಾತ್ರಿ ಕ್ಲಬ್ಬಿನಿಂದ ಬಂದು ಮಲಗಿದವಳು ಎಲ್ಲಿಯೋ ಹೊರಗೆ ಹೋಗಿರಲಿಲ್ಲ."

" ಮುಂಜಾನೆಯಿಂದ ಹನ್ನೊಂದು ಘಂಟೆಯವರೆಗೆ ನಿಮ್ಮ ಮನೆಯಲ್ಲಿ ವಾಚಮನ್ ಇದ್ದನೇ ?"

" ಇದ್ದನು. "

" ಕುಕ್ ? "

" ಇಲ್ಲ. "

" ಏಕೆ ?

"ಆದಿತ್ಯವಾರಕ್ಕೊಮ್ಮೆ ನಾವಿಬ್ಬರೂ ಯಾವದಾದರೂ ಔಟಿಂಗಿಗೆ ಹೋಗುತ್ತೇವೆ. ಹಾಗೂ ಕುಕ್‌ಳಿಗೂ ವಾರಕ್ಕೊಂದು ದಿನ ರಜೆಸಿಕ್ಕಂತಾಗಿರುತ್ತದೆ. ಅಷ್ಟೆ. "

" ಯಾವಕಾರಣದಿಂದಲಾದರೂ ಅವಳು ಈ ದಿವಸ ನಿಮ್ಮ ಮನೆಗೆ ಬಂದಿದ್ದಳೇ ?"

" ನಾನು ಮನೆಯಲ್ಲಿ ಇರುವರೆಗೆ ಬಂದಿರಲಿಲ್ಲ. "

" ಅವಳ ಮನೆಯಲ್ಲಿ ?"

" ಲೇವರ ಪರೇಳದಲ್ಲಿ, "

"ಸರಿ ಮತ್ತು ಆ ವಾಚಮನ್ ಈಗ ಎಲ್ಲಿಸಿಗಬಹುದು ನಮಗೆ?"

" ಆವನ ಮೇಲೆ ಸಂಶಯುವಿದೆಯೇ ?"

"ಕೇ ಮುಗಿಯುವವರೆಗೂ ಸಂಶಯಿವಿರತಕ್ಕದೇ. "

" ಅವನು ಮಾತುಂಗಕ್ಕೆ ತನ್ನ ತಂಗಿಯನ್ನು ಬೆಟ್ಟಿಯಾಗಲು ಹೋಗಿದ್ದಾನೆ. "

"ಅವರಿಬ್ಬರ ವಿಳಾಸ ಕೊಡುತ್ತೀ ?"

" ಓಹೋ ಅದಕ್ಕೇನು. " ಎಂದು ಎರಡು ವಿಳಾಸಗಳನ್ನು ಹೇಳಿದರು. ಸಿಂಗರು ನಿಮ್ಮ ಫೋನ ಸ್ವಲ್ಪ ಉಪಯೋಗಿಸುತ್ತೇವೆ. ಆದೀತೇ?

" ತಕ್ಕೊಳ್ಳಿರಿ. " ಎಂದು ಅನುಮತಿಸಿದಳು.

ಸಿಂಗರು ಪರೇಳ ಮತ್ತು ಮಾತಂಗ ಏರಿಯಾಗಳ ಪೋಲಿಸ ಟಾಣೆಗಳಿಗೆ ಫೋನ ಮಾಡಿ ಆ ವ್ಯಕ್ತಿಗಳನ್ನು ತಮ್ಮ ಕಚೇರಿಗೆ ರಾತ್ರಿ ಎಂಟು

ಘಂಟೆಯ ವಳಗಾಗಿ ಹಾಜರಿ ಪಡಿಸಬೇಕೆಂದು ಕೇಳಿಕೊಂಡರು. ನಂತರ ಸೋಫಿಯಾಳ ಕಡೆಗೆ ಹೊರಳಿ ಸರಿ ಇನ್ನು ನಿಮ್ಮ ಜವಾಬನ್ನು ಕೇಳಿಕೊಳ್ಳುವ ಎಂದರು.

" ಬೇಕಾದ ಪ್ರಶ್ನೆಗಳನ್ನು ಕೇಳಬಹುದು. " ಎಂದಳು.

" ಹನ್ನೊಂದು ಘಂಟೆಯ ವರೆಗೆ ನೀವು ಮಿಸ್ ಮಾಲಾಳೊಡನೆಯೇ ಇದ್ದಿರಲ್ಲವೇ ?

" ಇಲ್ಲ. ಒಂಭತ್ತು ವರೆಯುವರೆಗೆ ಇಬ್ಬರು ನಾಸ್ಟಾ ಮುಗಿಸಿದೆವು. ನಂತರ ನಾನು ಔಟಿಂಗಿಗೆ ಹೋಗುವ ಸಲುವಾಗಿ ನನ್ನ ಕೋಣೆಯಲ್ಲಿ ಸಿದ್ಧತೆ ನಡೆಸಿದ್ದೆ.

" ಮಿಸ್ ಮಾಲಾಳು ಔಟಿಂಗಿಗೆ ಬರಲಿಲ್ಲವೇ ? ಅಥವಾ ನೀವೇ ಕೇಳಲಿಲ್ಲವೋ ಹೇಗೆ "

" ನಾನು ಕೇಳಿದೆ. ಆದರೆ ಹಿಂದಿನ ರಾತ್ರಿ ಕ್ಲಬ್ಬಿನಲ್ಲಿ ಬಹು ಆಯಾಸಗೊಂಡಿರುವದಾಗಿಯೂ ಈ ದಿನ ಎಲ್ಲಿಯೂ ಹೋಗದೇ ಕೇವಲ ನಾಷ್ಟಾದಾ ಮೇಲೆಯೇ ಊಟ ಮುಗಿಸಿ ಸಾಧ್ಯವಾದಷ್ಟು ಹೆಚ್ಚುವೇಳೆ ನಿದ್ದೆಮಾಡುವಿರೆಂದು ಹೇಳಿದ್ದಳು. "

ನೀವು ಹೋಗುವರೆಗೆ ಯಾರು ಯಾರು ಅವಳನ್ನು ಕಾಣಲಿಕ್ಕೆ ಬಂದಿದ್ದರು.

" ಮಹಿಳಾ ಕ್ಲಬ್ಬಿನ ಪ್ರತಿನಿಧಿಗಳೊಬ್ಬರು ದೇಣಿಗೆಗಾಗಿ ಬಂದಿದ್ದರು. ಅವರಿಗೆ ನೂರು ರೂಪಾಯಿಗಳನ್ನು ಕೊಡಲಾಗಿದೆ.

" ಮತ್ತೆ ಯಾರು ? "

" ಯಾರು ಇಲ್ಲ. "

" ನೀವು ಮರೆಮಾಡುತ್ತಿದ್ದಿರೆಂದು ನನಗನಿಸುತ್ತದೆ.

" ಸತ್ಯವಾಗಿಯೂ ಇಲ್ಲ "

ಹೋಗಲಿ ಮಿಸ್ ಸೋಫೆಯೂ ನೀವು ಹನ್ನೊಂದು ಘಂಟೆಗೆ ಹೊರಗೆ ಹೊರಡಲಿಲ್ಲ. ತಿರುಗಿ ಬರುವ ವರೆಗೆ ನೀವು ಎಲ್ಲೆಲ್ಲಿ ಹೋದಿರಿ. ಹಾಗು ಏನೇನೂ ಮಾಡಿದಿರಿ ಹೇಳುತ್ತಿರಾ ?"

" ನಾನು ನೇರವಾಗಿ ಶಿವಾಜಿಪಾರ್ಕಿಗೆ ರಿಜ್ ಕ್ಲಬ್ಬಿನ ಕೋರಸ್ ಗಲಿನಿರತನಳ ಮನೆಗೆ ಹೋಗಿದ್ದೆ. ಅಲ್ಲಿಂದ ಬೇರೆ ಎಲ್ಲಿಯೂ ಹೋಗಲಿಲ್ಲ

ಅಲ್ಲಿಯೇ ಅವಳ ಒತ್ತಾಯಕ್ಕಾಗಿ ಊಟ ಮಾಡಬೇಕಾಯಿತು. ಅಲ್ಲಿಂದ ಎರಡು ಘಂಟೆಯನಂತರ ಹೊರಟು ಮನೆಗೆ ಬಂದಾಗ ಎರಡೂವರೆಆಗಿರ ಬಹುದು. ”

“ ಮನೆಯಲ್ಲಿ ಆಗ ನಿಮಗೆ ಯಾರು ಮೊದಲು ಕಣ್ಣಿಗೆಬಿದ್ದರು.

“ ವಾಚಮನ್ ರಜತನು ಗ್ಯಾರೇಜಿನಲ್ಲಿ ಮಲಗಿದ್ದ. ನಾನು ಕಾರು ಒಳಗೆ ನೂಕಹತ್ತಿದ್ದಾಗ ಎದ್ದು ಕಣ್ಣೊರುಸುತ್ತ ಹೊರಗೆ ಬಂದ.”

“ ನಿಮ್ಮಲ್ಲಿ ಏನಾದರೂ ಸಂಭಾಷಣೆ ಜರಗೀತೋ ?’

“ ಅವನು ಹೇಳಿದ. ನಾನು ಮಾತಂಗಕ್ಕೆ ನನ್ನ ತಂಗಿಯನ್ನು ಭೆಟ್ಟಿಯಾಗಿ ಬರುತ್ತೇನೆಂದು ಬೆಳಗಿನಲ್ಲಿಯೇ ನಮ್ಮಿಬ್ಬರೆದುರಿಗೂ ಹೇಳಿದ್ದ [illegible] ನನು ಆಲಶ್ಯದಿಂದಿರುವದರಿಂದ ಏನಾದರೂ ಸಹಾಯ ಬೇಕಾಗಿರಬಹುದು ಹಾಗು ಸೋಫಿಯಾ ಬಂದ ನಂತರ ನೀನು ಹೋಗಬಹುದು ಎಂದು ಹೇಳಿದ್ದಳು. ಅವನು ಅದಕ್ಕೆ ಒಪ್ಪಿಗೆ ಕೊಟ್ಟಿದ್ದು ನಾನು ಕಾರಿನಿಂದಿಳಿದ ಕೂಡಲೇ ತಾನು ಹೋಗುತ್ತೇನೆಂದು ಹೇಳಿ ಹೋದ

“ ಸರಿ ಅವನೇ ಒಬ್ಬನೇ ಕೊಲೆ ನಡೆದ ಕಾಲದಲ್ಲಿ ಇಲ್ಲಿ ಇದ್ದವನೆಂದರೆ ಅವನ ಸ್ಟೇಟಮೆಂಟಿನ ಮೇಲೆ ಇಡೀ ಕೇಸು ನಿಂತಿದೆ. ಎಂದರು ಸಿಂಗ.

ಕೆಲನಿಮಿಷ ಮೌನವು ಆವರಿಸಿತು. ಆದರೆ ಸಿಂಗರಿಗೆ ಮತ್ತೊಂದು ವಿಚಾರ ಹೊಳೆಯಿತು. “ ಮಿಸ್ ಸೋಫಿಯಾ ನಿಮ್ಮ ಕಾರಿನ ಮುಂದಿನ ಮೆಟ್‌ಗಾರ್ಡ ಏಕೆ ಧಕ್ಕೆಗೊಂಡಿದೆ ?”

“ ಓಹೋ ಅದೇ ನಾನು ಕಾರ ಡ್ರಾಯಿಂಗ ಮಾಡಿಕೊಂಡು ಕಂಪೌಂಡಿನಿಂದ ಹೊರಗೆ ಒಯ್ಯುವಾಗ ಹೊರಳಿಸುವದು ಸ್ವಲ್ಪ ಅನನಕೂಲವಾಯಿತು. ಕಾರು ಅರೆತೆರೆದು ಗೇಟಿನ ಕದ ಅರ್ಧ ಮುಚ್ಚಿತ್ತು. ಅದಕ್ಕೆ ಕಾರು ಹಾಯ್ದು ಬಿಟ್ಟಿತು. ಬಾಗಿಲು ದೂಡಿಕೊಂಡು ಮುಂದೆ ಹೋಗಿ ಬಿಟ್ಟಿದ್ದರಿಂದ ಗೋಡೆಗೆ ಕಾರು ಹಾಯಿತು. ಅವಕ್ಕೆ ಸ್ವಲ್ಪ ಧಕ್ಕೆಯಾಗಿದೆ.

“ಇನ್ನೊಂದು ಪ್ರಶ್ನೆ ಕೇಳುತ್ತೇನೆ ಮಿಸ್‌ಸೋಫಿಯಾ. ಅದನ್ನು ಕೊನೆಯದಾಗಿ ಹಾಗೂ ಅನಿವಾರ್ಯವಾಗಿ ಕೇಳುತ್ತಿದ್ದೇನೆ ಆದರಿಂದ ಲೇನಾದರೂ ಸಹಾಯವಾದೀತೇ ಎನಿಸುತ್ತದೆ. ”

" ಬೇಕಾದ ಪ್ರಶ್ನೆಯನ್ನು ಕೇಳಬಹುದು. "

" ಮಿಸ್‌ಮಾಲಾಳ ಪ್ರೇಮವ್ಯವಹಾರದ ಬಗ್ಗೆ ನಿಮಗೆಷ್ಟು ಮಾಹಿತಿಇದೆ ?"

"ನನಗೆ ತಿಳಿದ ಮಟ್ಟಿಗೆ ನಾವಿಬ್ಬರೆಂದೂ ಯಾರನ್ನ ಪ್ರೇಮಿಸಿಲ್ಲ"

"ಅದು ಪೂರ್ಣ ಉತ್ತರವಾಗಲಿಲ್ಲ. ಸ್ವಲ್ಪ ವಿಶದವಾಗಬೇಕು"

'ನಾವು ಕೇವಲ ನೃತ್ಯಮಾಡುವವರಷ್ಟೆ. ಅವಳು ದೊಡ್ಡದೊಡ್ಡ ಕ್ಲಬ್ಬಗಳಲ್ಲಿ ಭಾಗವಹಿಸುತ್ತಿದ್ದಳು. ನಾನು ಅವಳ ಇದ್ದಲ್ಲಿ ಕೋರಸ್ ಗರ್ಲ ಆಗಿ ಮಾತ್ರ ಹಿಂಭಾಲಿಸುತ್ತಿದ್ದೆನು."

"ನಿಮಗೆ ಯಾರಾದರೂ ಹಣದ ರೂಪದೆ ಸಾಯ ಹೆಚ್ಚಿದ್ದರೇನು"

"ನನಗೆ ವುಳಿದ ಮಟ್ಟಿಗೆ ಯಾರೂ ಇಲ್ಲ.'

"ಯಾರಾದರೂ ಒಬ್ಬ ವ್ಯಕ್ತಿಯೊಡನೇಯೇ ವಿಶೇಷ ಸಲುಗೆಯಿಂದ ವಿಹರಿಸುತ್ತಿದ್ದಳೇನು ಇತ್ತೀಚಿಗೆ?"

"ನನಗೇನೂ ಕಂಡು ಬಂದಿಲ್ಲ ಆದರೆ ಈಗೆರಡು ದಿನಗಳಿಂದ ಮಯೂರ ಪಂಖಳು ಒಬ್ಬ ಯುವಕನೊಡನೆ ಶಾಪಿಂಗಿಗೆ ಹೋಗಿದ್ದಳು. ಒಂದು ರಾತ್ರಿ ಕ್ಲಬ್ಬಿನಲ್ಲಿ ನಾವು ಮೂವರು ಕೊಡಿಯೇ ಪೇಯ ಕುಡಿದಿದ್ದೆವು

"ಒಹೋ ಅವರ ಹೆಸರೇನೆಂಬುದನ್ನು ಬಲ್ಲಿರಾ?'

"ಇಲ್ಲ. ಯಾರೂ ನನ್ನನ್ನು ಅವರಿಗೆ ಪರಿಚಯ ಮಾಡಿಕೊಡಲಿಲ್ಲ ಹಾಗೂ ನನಗೆ ಅವರ ಪರಿಚಯ ಮಾಡಿಕೊಡಲಿಲ್ಲ,'

' ಅವರ ವ್ಯಕ್ತಿತ್ವದ ಹೇಳುತ್ತೀರಾ ಬಗ್ಗೆ,

' ಅವರಿಗೆ ಮೂವತ್ತು ವಯಸಾಗಿರಬೇಕು. ಸ್ವಲ್ಪ ದಪ್ಪಗೆ ದುಂಡಗೆ ಇದ್ದಾರೆ ಮುಖಮಾತ್ರ ಅಗಲಕ್ಕಿಂತ ಉದ್ದ ಹೆಚ್ಚಿದೆ. ತಲೆಗೂದಲ ಮಧ್ಯದಲ್ಲಿ ವಿಭಾಗಿಸುತ್ತಾರೆ. '

' ಇಷ್ಟರ ಮೇಲೆ ಪತ್ತೆಯಾಗುವದು ದುಸ್ತರ. ನಮ್ಮ ಕಚೇರಿಗೆ ನಿಮ್ಮನ್ನು ಈಗ ಕರೆದುಕೊಂಡು ಹೋಗುತ್ತೇನೆ ಅಲ್ಲಿ ಒಂದು ಫೈಲ ನಿಮಗೆ ಕೊಡುತ್ತೇನೆ. ನೀವು ಗುರ್ತು ಹೇಳಿದ ವ್ಯಕ್ತಿಯ ಭಾವಚಿತ್ರ ಅದರಲ್ಲಿದ್ದರೆ ನೆಟ್ಟಗಾದೀತು " ಎಂದು ಹೇಳಿ ನಡೆಯಿರಿ. ಎಂದು ಸಿಂಗರು ಹವಾಲ್ದಾರನನ್ನು ಕರೆದು ಲಾರಿಯಲ್ಲಿ ಅವಳನ್ನು ಕಚೇರಿಗೆ ಒಯ್ಯಲು ಹೇಳಿ ತಾವು ಜೀಪ ತೆಗೆದುಕೊಂಡು ಹಿಂಬಾಲಿಸಿದರು. ಹೋಗುವಾಗ

ಬಾಗಿಲಿನಲ್ಲಿದ್ದ ಸೆಂಟ್ರೆಗಳನ್ನು ಕರೆದು "ಮನೆಗೆ ಬೀಗ ಹಾಕಿಲ್ಲ ಕಂಪೌಡಿನ ಸುತ್ತು ಮುತ್ತ ಯಾರನ್ನೂ ಹಾಯಿಸ ಕೊಡಬೇಡಿರಿ. ಇದೊಳ್ಳೇ ಬಿಕ್ಕಟ್ಟಿನ ಸಮಯ ಬಂದಿದೆ." ಎಂದು ಹೇಳಿದರು.

ಸೆಂಟ್ರೆಗಳು ಸಂಜೆಯ ಮಬ್ಬುಗತ್ತಲೆಯಲ್ಲಿ ಗೇಟನ್ನು ಹಾಕಿಕೊಂಡು ಒಳಗೆ ವಿಶಾಲವಾದ ಬಯಲಿನಲ್ಲಿ ಸಿಗರೇಟು ಹಚ್ಚಿಕೊಂಡು ಕುಳಿತುಕೊಂಡರು.

## ( ೬ )

ಸಿಂಗರು ಕಚೇರಿಗೆ ಬಂದು ನೇರವಾಗಿ ತಮ್ಮ ಕೋಣೆಗೆ ಹೋಗಿ ಕುಳಿತು ಕೊಂಡರು ಶಿಪಾಯಿಯೊಬ್ಬನು ವ್ಹಿಜಿಟಿಂಗ ಕಾರ್ಡನ್ನೊಂದನ್ನು ಅವರ ಮೇಜಿನ ಮೇಲಿರಿಸಿದನು. ಅದನ್ನು ನೋಡಿಕೊಂಡು ಬೆಲ್ ಬಾರಿಸಿ ಆಗಂತುಕರನ್ನು ಕರೆತರಲು ಹೇಳಿದರು

'ಗುಡ್ ಇವ್ ನಿಂಗ್ ಸರ್' ಎಂದಿತು ವ್ಯಕ್ತಿ.

'ಹೋ ನೀವೇನು ಹೊಸದಾಗಿ ಬಂದಿದ್ದಿರೇನು ಮುಂಬಯಿಗೆ'

'ನಿಜ. ಈಗ ಎರಡು ತಿಂಗಳಾಯಿತು. ನಾನು ಮದರಾಸಿನಿಂದ ಇಲ್ಲಿಗೆ ಬಂದಿದ್ದೇನೆ. ಅಲ್ಲಿಯ ನೆಕೆ ತಡೆಯಲಾರದೆ. ಇಲ್ಲಿಗೆ ವರ್ಗಾಯಿಸಿಕೊಂಡು ಬಂದೆ.'

'ಒಳ್ಳೇಯದಾಯಿತು. ನಿಮ್ಮ ಹೆಸರೇನು. ?

'ಚಂದ್ರಮೋಹನ ರಾಯ್'

'ಈಗೇನು ಅವಶ್ಯಕ ಕೆಲಸದನಿಮಿತ್ತ ಬಂದಿದ್ದೀರಿ'

'ಆ ಕ್ಲಬ್ ಡಾನ್ಸರ ಮಿಸ್ ಮಾಲಾಳ ಕೊಲೆಯಾಗಿದೆಯಂತೆ ನನ್ನ ಮಿತ್ರ ಚೌಪಾಟಿಯಲ್ಲಿ ಹೇಳಿದ 'ಥಿಯೇಟರ' ವಾರಪತ್ರಿಕೆಯ

ವರದಿಗಾರನಾದ ನನಗೆ ಈ ವಿಷಯದ ಮಾಹಿತಿ ಅವಶ್ಯವೆನಿಸಿತು ಅದಕ್ಕೆ ಇಲ್ಲಿಗೆ ಬಂದೆ. '

'ನೀವು ಘಟನೆಯಾದ ಸ್ಥಳವನ್ನು ಸಂದರ್ಶದೆ ಇಲ್ಲಿ ಕೇವಲ ರಿಪೋರ್ಟ ತಿಗೆದುಕೊಂಡು ವರದಿ ಮಾಡಿದರೆ ಅದುನಿಜವಾಗಬಲ್ಲದೆರಾಯ್'

'ನಾನಲ್ಲಿ ಹೋಗಿದ್ದೆ. ಈಗ ಹದಿನೈದು ಇಪ್ಪತ್ತು ನಿಮಿಷಳ ಹಿಂದೆ ಆದರೆ ನಿಮ್ಮ ಜನರು ನನೆಗೇನೂ ಮಾಹಿತಿ ಕೊಡುವದು ಶಕ್ಯ ವಿಲ್ಲವೆಂದು ಹೇಳಿದರು. ಅದಕ್ಕಾಗಿ ಇಲ್ಲಿಗೆ ಧಾವಿಸಬೇಕಾಯಿತು.

'ನಾನೀಗಸದ್ಯಕ್ಕೆಏನೂ ಹೇಳಲಾರೆನೀವು ಪತ್ರಿಕಾಕರ್ತರು ನೀವು ನಂಬಿಗೆಯಿಂದ ಹೇಳಿದುದನ್ನು ಬಣ್ಣ ಕೊಟ್ಟು ಪ್ರಕಟಿಸಿಬೀಡುತ್ತೀರಿ. ಇಷ್ಟೇ ಅಲ್ಲದೆ ನಾನಿನ್ನು ಯಾರನ್ನು ನಿಂಧಿಸಿಲ್ಲ. ನೀವು ಇನೊಂದು ಘಂಟೆಯ ನಂತರ ಬರಬಹುದು. ಇಲ್ಲವೇ ನಾಳೆ ಬಂದರೆ ಅನೂಕೂಲ.

"ಥ್ಯಾಂಕ್ಸ" ಎಂದು ಹೇಳಿ ಚಂದ್ರಮೋಹನ ಹೊರಟುಹೋದ

ನಂತರ ಐದು ನಿಮಿಷಗಳ ಬಳಿಕ ಇಬ್ಬರು ಪೋಲಿಸ ಜಮಾದಾರರು ರಜಿಕನನ್ನು ಹಾಗು ನೂರಳನ್ನು ಕರೆದುಕೊಂಡು ಬಂದಿದ್ದೇನೆಂದು ಹೇಳಿಕಳಹಿಸಿದರು. ಸಿಂಗರು ನೂರಳನ್ನೂ ಕಳಿಸಿಕೊಡಲು ಅಪ್ಪಣೆಮಾಡಿದರು.

ನೂರ ಬಂದು ಸಿಂಗರ ಎದರಿಗಿದ್ದ ಕುರ್ಚಿಯ ಮೇಲೆ ಕುಳಿತುಕೊಂಡಳು. ಅವಳಿಗೆ ಮಧ್ಯವಯಸ್ಸು ರೂಪವು ಅವರೆ ಚಿಕ್ಕಂದಿನಲ್ಲಿ ಯೇ ಚಾಡಿ ಹೇಳಿರಬೇಕು. ಇಲ್ಲವೆ ಪ್ರಾಯಕ್ಕೆ ಬಂದೊಡನೆ ಯಾರೋ ದರೊಡೆ ಮಾಡಿಕೊಂಡು ಹೋಗಿರಬೇಕು. ಅವಳು ವಿಧವೆಯಂತೆ ಅಥವಾ ಲಗ್ನವಿಲ್ಲದೇ ಉಳಿದುಕೊಂಡ ಹಳೆ ಹುಡಿಗೆಯಂತೆ ಕಾಣುತ್ತಿದ್ದಳು. ವೇಷದಲ್ಲಿಯೇ ಆಡಂಬರವಿರಲಿಲ್ಲ.

ಇನ್ಸಪೆಕ್ಟರು ಸಿಂಗ ತಲೆಎತ್ತಿನೋಡಿ ಓಹೋ ನಿಮ್ಮ ಹೆಸರು ನೂರ್ ಏನು ಎಂದರು.

'ಅಹುದು ರಾವಸಾಬ'

"ನೀವು ಮಿಸ್ ಮಾಲಾಳ ಮನೆಯಲ್ಲಿ ಯಾವ ಕೆಲಸಕ್ಕಿದ್ದೀರಿ?

"ನನ್ನ ಕೆಲಸ ಎರಡು ಹೊತ್ತು"ಪೇಟೆಯಿಂದ ಎಲ್ಲ ಅಡಿಗೆಯು ಸಾಮಾನುಗಳನ್ನು ತರುವದು, ಅಡಿಗೆ ಮಾಡುವದು ರೆಫ್ರಿಜಿಕೇಟರವಲ್ಲಿ

ಇಟ್ಟು ನನ್ನ ಮನೆಗೆ ಹೋಗುವದು.''

'ಹಾಗಾದರೆ ನೀವು ಈ ದಿವಸ ಮುಂಜಾನೆ ಪೇಟೆಯಿಂದ ಎಷ್ಟು ಘಂಟೆಗೆ ಹೋಗುವಿರಿ ?'

" ಈ ಹೊತ್ತು ಆದಿತ್ಯವಾರ ನನಗೆ ರಜೆ ಇರುತ್ತದೆ. ಅದ್ದರಿಂದ ನಾನು ಈ ದಿನ ಯಾವ ಕೆಲಸವನ್ನು ಮಾಡಲಿಲ್ಲ. ನಾನು ಅವರ ಮನೆಗೆ ಹೋಗಲಿಲ್ಲ."

" ಹಾಗಾದರೆ ಆದಿತ್ಯವಾರ ನಿಮ್ಮ ಸಾಹುಕಾರರನ್ನು ಉಪವಾಸ ಕೆಡವಿತ್ತಿರೇನು ? ಅಥವಾ ಅವರೇ ಉಪವಾಸ ಮಾಡುತ್ತಾರೆಯೇ ?

" ಇಲ್ಲ. ಆದಿತ್ಯವಾರ ಅವರೆಲ್ಲಿಗಾದರೂ ಹೊರಗೆ ಹೋಗುತ್ತಾರೆ ಊಟಕ್ಕೆ. ಆದ್ದರಿಂದ ಆದಿತ್ಯವಾರದ ಕೆಲಸಕ್ಕೆ ರಜೆ ಕೊಟ್ಟಿದ್ದಾರೆ. ನನಗೆ

" ಇರಲಿ. ನೀವು ಅವರ ಮನೆಯಲ್ಲಿ ಎಷ್ಟು ವರ್ಷಗಳಿಂದ ದುಡಿಯುತ್ತ ಬಂದಿದ್ದೀರಿ ?"

" ಐದಾರು ವರ್ಷಗಳಿಂದ ''

" ಅದಕ್ಕೂ ಮೊದಲು ಎಲ್ಲಿ ಕೆಲಸಕ್ಕಿದ್ದೀರಿ ?'

" ಅದೇ ಮನೆಯಲ್ಲಿ ಫರಂಗೀ ಸಾಹೇಬರಿದ್ದರು. ಅವನು ಸೀಮೆಗೆ ಹೋದನಂತರ ಈಗಿನವರು ಬಂದರು. ನಾನೇ ಅವರಲ್ಲಿ ಕೈಕಾಲು ಹಿಡಿದು ಕೆಲಸ ಕಾಯಂ ಮಾಡಿಕೊಂಡೆ.

" ಮಿಸ್ ಮಾಲಾಳ ಕೊಲೆಯಾಗಿದೆಯಲ್ಲಿ. ಇದರಲ್ಲಿ ನಿಮಗೆ ನಾವರೂ ಮಾಹಿತಿ ಇದೇಯೇ ?'

" ನನಗೆ ವಿಚಿತ್ರವಾಗಿ ತೋರುತ್ತದೆ ಇದೆಲ್ಲ ರಾವಸಾಬ. ಯಾಕಂದರೆ ನಿನ್ನಿನ ವರೆಗೆ ನಗುತ್ತಲಿದ್ದವರನ್ನು ಈ ಹೊತ್ತು ಕೊಲ್ಲಬೇಕಾದರೆ ಎಂಥ ಅಘಘಾತ ಎನಿಸುತ್ತದೆ.

" ನಮಗೂ ಹಾಗೇಯೇ ಎನಿಸುತ್ತದೆ. ಆದರೆ ನನ್ನ ಪ್ರಶ್ನೆಗೆ ಇದು ಉತ್ತರವಾಗಲಾರದು.'

" ನಾನು ಆಗಲೇ ಹೇಳಿದೆನಲ್ಲ.' ರಾವಸಾಬ ನನಗಿದರಲ್ಲೇನೂ ತಿಳಿಯುವದಿಲ್ಲವೆಂದು.'

" ಆದು ಹೇಗೆ ತಿಳಿಯಲಾರದು ? ನೀವು ಐದುದು ವರ್ಷಗಳಿಂದ ದುಡಿಯುತ್ತ ಬಂದಿರುವಿರಿ ಅಂದ ಮೇಲೆ ಅವರ ಎಲ್ಲ ಗುಣಗಳೂ

ನಿಮಗೆ ಗೊತ್ತಿರಬೇಕು.

" ಗುಣಗೊತ್ತಿದ್ದ ಮಾತ್ರಕ್ಕೆ ಈ ಕೆಲಸ ಹೇಗೆ ನಡೆಯಿತೆಂದು ನಾನು ಹೇಗೆ ಹೇಳಲಿಕ್ಕೆಂದೀತು ರಾವಸಾಬ ?'

' ನಾನು ತಿಳಿಯುತ್ತೇನೆ. ಈ ಕೆಲಸ ನಿವೇ ಮಾಡಿದ್ದೀರೆಂದು' ಸಿಂಗ ಒಮ್ಮೆಲೆ ಕೇಳಿದವರಂತೆ ಅಭಿನಯಿಸಿ ಹೇಳಿದರು. ಹಾಗು ಅವಳ ಮುಖದ ಮೇಲಿನ ಪರಿಣಾಮವನ್ನು ತೀಕ್ಷಣವಾಗಿ ನಿರೀಕ್ಷಿಸಿದರು.

' ಆರಿ ಅಲ್ಲಾ ! ' ಎಂದು ಒಮ್ಮೆಲೆ ನೂರ ಎರಡೂ ಕೈಗಳಿಂದ ಕಿವಿ ಮುಚ್ಚಿಕೊಂಡಳು. ಮುಖ ಒಮ್ಮೆಲೆ ಬಿಳಾಸಿಕೊಂಡಿತು. ಒಂದು ಕ್ಷಣ ರಕ್ತ ಹರಿದಾಡುವದು ನಿಂತಂತಾಯಿತು.

' ನಾನು ಸುಳ್ಳನ್ನು ಹೇಳಲಿಲ್ಲವಷ್ಟೆ? ಎಂದು ಮತ್ತೆ ಕೆದರಿ ಕೇಳಿದರು. ಸಿಂಗ. '

' ರಾವಸಾಬ, ನಾನು ಹೇಳಿದರು ನೀವು ನಂಬುವದಿಲ್ಲ ಸುಳ್ಳು ಹೇಳಿದರೂ ನಂಬಲಾರರಿ. ಅದಕ್ಕೆ ಪುನಃ ದೋಷಕೊಡುತ್ತೀರಿ. ಅದರಿಂದ ನಾನು ಮಾತನಾಡಲಿಕ್ಕೆ ಇಚ್ಛಿಸುವದಿಲ್ಲ. '

" ಹಾಗೆ ಹೇಳಿರಿ. ಬೇಗಂ. ಕಳ್ಳನ ಹೃದಯವು ಯಾವಾಗಲೂ ಇದೇ ರೀತಿಯಾಗಿದೆ. ಅಲ್ಲಸಲ್ಲದ ಪ್ರಶ್ನೆಗಳಿಗೆ ನೆರವಾಗಿ ಉತ್ತರಕೊಡುವದು ಹಾಗು ಘಟನೆಯ ಬಗ್ಗೆ ಬಂದೊಡನೆ ಸುಮ್ಮನಾಗಿ ಬಿಡುವದು ರೂಢಿ ನೀವು ಹೀಗೆ ಸುಮ್ಮನೆ ಕುಳಿತರೆ ಆಗಲಿಕ್ಕಿಲ್ಲ. ಅಥವಾ ನೀವೇ ಅಪರಾದಿಯೆಂದು ತಿಳಿಯಬೇಕಾದೀತು. ನೋಡಿರಿ. "

" ನಾನು ಇದುವರೆಗೆ ಸುಳ್ಳು ಹೇಳಲಿಲ್ಲ ರಾವಸಾಬ. ನೀವು ದೊಡ್ಡ ಸಾಹೇಬರು. ನಾನು ನಿಮ್ಮನ್ನು ಕೇಳುತ್ತೇನೆ. ಯಾರದಾದರೂ ಖೂನಿಯಾಗಬೇಕಾದರೆ ಖೂನಿಯಿಂದ ಏನಾದರೂ ಲಾಭವಿರಬೇಕಲ್ಲವೇ?

" ಇರಬೇಕು. ಆದರೆ ಯಾವಾಗಲೂ ಎಂದು ಹೇಳಲಿಕ್ಕಾಗುವದಿಲ್ಲ. ನೀವು ಮಿಸ್‌ಮಾಲಾಳ ಹಣಕ್ಕಾಗಿ ಕೊಲೆಮಾಡಿರಬೇಕೆಂದು ಎನಿಸುತ್ತದೆ.

" ಇಲ್ಲ ರಾವಸಾಹೇಬ. ನನಗೆ ಅವರು ಕೊಡುವ ಪಗಾರವೇ ಹೆಚ್ಚಾಗಿದೆ.

ಅವರೆಷ್ಟು ಪಗಾರ ಕೊಡುತ್ತಿದ್ದರು ?'

‘ ದಿನಾಲು ಐದು ರೂಪಾಯಿ.

“ ಆದಿತ್ಯವಾರಸಹ ?”

“ ಹೌದು ”

“ ಪಗಾರವನ್ನು ತಿಂಗಳಿಗೊಮ್ಮೆ ಕೊಡುತ್ತಿದ್ದರೋ ಅಥವಾ ವಾರಕೊಮ್ಮೆ ಕೊಡುತ್ತಿದ್ದರೋ ?’

‘ ದಿನಾಲು ರಾತ್ರಿ ಹೋಗುವಾಗ ಕೊಡುತ್ತಿದ್ದರು. ’

‘ ಹಿಗೇಕೆ ?’

“ ಅವರಿಗೆ ಒಮ್ಮೆಲೆ ಕೊಡಬೇಕೆಂದರೆ ದೊಡ್ಡ ರಕಂ ಆಗುತ್ತಿಂತೆ

“ ಹಾಗಾದರೆ ಆದಿತ್ಯವಾರದ ಪಗಾರಕ್ಕೆ ಈ ದಿವಸ ಎಷ್ಟು ಘಂಟೆಗೆ ಹೋಗಿದ್ದಿರಿ, ?”

“ ನನಗೆ ಆದಿತ್ಯವಾರದ ಪಗಾರ ಸೋಮವಾರ ದಿವಸ ಸಿಗುತ್ತದೆ. ಆದಿತ್ಯವಾರ ದಿವಸ ನಾನು ಅವರ ಮನೆಯ ಕಡೆ ಸಹ ಹಾಯುದಿಲ್ಲ. ”

“ ನೋಡ್ರಿ ಬೇಗಂ ನೀವು ಕೊಲೆಮಾಡಿ ಅದನ್ನು ತಪ್ಪಿಸಿಕೊಳ್ಳಲು ಏನೇನೋ ಸುಳ್ಳು ವಿಷಯಗಳನ್ನು ಹೇಳುತ್ತಿರುವಿರಿ. ”

“ ನೀವೇ ತಿಳಿದುಕೊಂಡಂತೆ ರಾವಸಾಬ. ನಾನು ಇದಕ್ಕಿಂತ ಏನೂ ಹೆಚ್ಚು ಹೇಳಲಿಕ್ಕೆ ಸಾದ್ಯವಿಲ್ಲ. ”

‘ ಹೋಗಲಿ ಬೇಗಂ. ಹಾಗಾದರೆ ಉತ್ತರ ಮೇಲೆ ನೀವು ಸಂಶಯ ಪಡುತ್ತೀರಿ ಈ ಕೊಲೆಯಲ್ಲಿ ?’

‘ ನನ್ನಿಂದ ಉತ್ತರ ಕೊಡುವದು ಆಗುವದಿಲ್ಲ ರಾವಸಾಬ. ’

‘ ಏಕೆ ಮನೆಕಾಯುವ ಆಳು ಇದ್ದನಲ್ಲ ಅವನ ಹೇಸರೇನು ರಜಕವ್ವೋ ?’

‘ ಅಹುದು. ’

“ ಆವನೇ ಏಕೆ ಕೊಲೆ ಮಾಡಿರಬಾರದು. ’

“ ಬೇಗಂ ನೀವು ಮತ್ತೊಬ್ಬರನ್ನು ಉಳಿಸಲಿಕ್ಕೆ ಪ್ರಯತ್ನ ಮಾಡುತ್ತಿದ್ದೀರಿ. ಅಲ್ಲವೇ ?’

“ ಹಾಗಲ್ಲ ರಾವಸಾಬ. ಕೊಲೆಗೆ ಏನೂ ಉದ್ದೇಶವಿರದೆ ಹೇಗೆ ನಡೆಯಬಹುದು. ಒಡತಿಯನ್ನು ಕೊಂದರೆ ರಜಕನಿಗೇನು ಲಾಭ ?”

‘ ಹಣ ಸಿಗಲಿಕ್ಕಿಲ್ಲವೇ ?’

‘ ಹಣ ಹೇಗೆ ಸಿಗುವದು ರಾವಸಾಬ, ’

‘ ಮಿಸ್ ಮಾಲಾಳ ಹಣ, ’

‘ ಒಡತಿಯವಳ ಹಣವನ್ನು ಕಾಯುವವರು, ರಜಕನೆಂದುಕೊಂಡಿದ್ದಿರೇನು ರಾವಸಾಬ ?’

“ ಹಾಗಾದರೆ ಯಾರು ಕಾಯುತ್ತಾರೆ. ”

“ ಬ್ಯಾಂಕಿನವರು. ”

“ ಅಥವಾ ಯಾರಾದರೂ ರಜಕನಿಗೆ ಕೊಲೆ ಮಾಡಲಿಕ್ಕೆ ಹೇಳಿರಬೇಕು. ಎನಿಸುತ್ತದೆ. ”

“ ಅದು ನನಗೆ ಹೇಗೆ ತಿಳಿಯಬೇಕು. ರಾವಸಾಬ, ”

“ ಹೇಗೆ ತಿಳಿಯಬೇಕೇ ? ಆವನೂ ನೀವೂ ಕೂಡಿಯೇ ಕೊಲೆ ಮಾಡಿದ್ದೀರಿ. ಅದಕ್ಕೆ ಇಬ್ಬರೂ ದಿಕ್ಕಿಗೊಂದು ಕಡೆ ಹೋಗಿಬಿಟ್ಟಿದ್ದೀರಿ. ಮತ್ತು ಇಲ್ಲಿ ಉತ್ತರ ಕೊಡುವಾಗ ಸಹ ಅವನನ್ನು ಉಳಿಸಿಕೊಂಡೇ ಮಾತನಾಡುತ್ತಿದ್ದೀರಿ. ಕೊನೆಗೆ ಇಬ್ಬರಿಗೂ ಮರಣದಂಡನೆ ತಪ್ಪುವದಿಲ್ಲ.”

“ ಕೊಲೆ ಮಾಡಿದವರು ಗಲ್ಲಿಗೇರುತ್ತಾರೆ. ನಾವೇಕೆ ಹೋಗುತ್ತೇವೆ. ರಾವಸಾಬ ?”

“ ನಿಮ್ಮ ಮೇಲೆ ಅಪರಾದ ಸಿದ್ಧವಾದರೆ ”

“ ಅದು ಕೊನೆಯ ಮಾತು ರಾವಸಾಬ ”

“ ಹಾಗಾದರೆ ನೀವೆ ಕೊಲೆ ಮಾಡಿದ್ದೀರೆಂದು ಅರ್ಥವೇ ?’

“ ಹೇಗಾದೀತು ರಾವಸಾಬ. ”

“ ಇನ್ನೆರಡು ದಿನಗಳಲ್ಲಿಯೇ ನ್ಯಾಯಾಧೀಶರಿಂದಲೇ ತಿಳಿಸುತ್ತೇನೆ, ಅದರ ಕಾಳಜಿ ನಿಮಗೇಕೆ. ’

“ ಆಗಬಹುದು. ರಾವಸಾಬ, ನಾನಿನ್ನು ಹೊರಡಲೇ ’

“ ನೀವು ಇನ್ನೂ ಮುಕ್ತರಾಗಿಲ್ಲ. ತಡೆಯಿರಿ ಎಂದು ಬೆಲ್ ಬಾರಿಸಿದರು. ಜವಾನನೊಬ್ಬ ಓಡಿ ಬಂದನು. ‘ಪರೇಳ ಪೋಲಿಸರನ್ನು’ ಕರೆ ಎಂದರು, ನಂತರ ಇವರನ್ನು ಕರೆದುಕೊಂಡು ಪರೇಳ ಸ್ಟೇಶನ್ನಿನಲ್ಲಿ ನಿಮ್ಮ ನಜರ ಬಂದಿಯಲ್ಲಿಡಿರಿ. ಎಂದು ಅಜ್ಞಾಪಿಸಿದರು. ಪೋಲೀಸನು ಸಲಾಂ ಹೊಡೆದು ನೂರಳನ್ನು ಕರೆದುಕೊಂಡು ಹೊರಗೆ ಹೋದ.

( ೭ )

ಇನ್ಸಪೆಕ್ಟರರ ಸಿಂಗ ಸಿಗರೇಟು ಹಚ್ಚಿಕೊಂಡು ಮೇಜಿನ ಮೇಲಿದ್ದ ಹಾಳೆಗಳನ್ನು ತಿರಿವಿ ಹಾಕುತ್ತಿದ್ದರು. ವಿಶ್ರಾಂತಿ ಬೇಕಿದ್ದಿತ್ತೇನು ಆ ವರಿಗೆ ಸಿಗರೇಟು ಮುಗಿದಾದನಂತರ ಬೆಲ್ ಬಾರಿಸಿದರು. ಜವಾನ್ ಬಂದನು. 'ರಜಾಕನನ್ನು ಕರೆ.' ಯೆಂದು ಅಪ್ಪಣೆ ಇತ್ತರು

' ರಜಕ ಒಳಗೆ ಬಂದವನೇ ಮಿಲಿಟರಿ ಸಲಾಂ ಹೊಡೆದು ನಿಂತುಕೊಂಡ.

ಸಿಂಗ ಅವನನ್ನು ಖುರ್ಚಿಯ ಮೇಲೆ ಕುಳಿತುಕೊಳ್ಳಲು ಹೇಳಿದರ್‍ರು ಆದರಂತೆ ರಜಕನು ಕುಳಿತಕೊಂಡನು. ಅವನು ಬಹು ಎತ್ತರವಾಗಿದ್ದನು ಖಳನಾಯಕನಂತೆ ಮೀಸೆಯನ್ನು ಕತ್ತರಸಿಕೊಂಡಿದ್ದನು. ಖಡ್ಗಾಕೃತಿಯಲ್ಲಿ ದಷ್ಟಪುಷ್ಟನಾಗಿದ್ದನು. ಆದರೂ ಮುಖದ ಮೇಲೆ ನೀರಿಗೆಗಳು ಕಾಣಬರುತ್ತಿದ್ದವು. ಆ ಮುಖದಲ್ಲೇನೂ ಸೌಂದರ್ಯವಿರಲ್ಲಿಲ್ಲ. ವಿಕಾರವಾಗಿದ್ದಿತು

ನಿನ್ನನ್ನು ಏಕೆ ಕರೆಯಿಸಿದ್ದು ಗೊತ್ತಿದೆಯಿಲ್ಲವೇ! ಎಂದು ಪ್ರಶ್ನಿಸಿದರು.

' ಪೋಲಿಸರು ಹೇಳಿದ್ದು ಅಷ್ಟೆ ಗೊತ್ತು ರಾವಸಾಬ '

' ಏನೆಂದು ಹೇಳಿದರು '

' ದೊಡ್ಡ ಯಜಮಾನತಿಯವರ ಖೂನಿ ಆಗಿದೆಯೆಂದು. '

"ಅಲ್ಲಿಯವರೆಗೆ ನಿಮಗೆ ಗೊತ್ತಿರಲಿಲ್ಲವೆ. ?"

"ಇಲ್ಲ ರಾವಸಾಬ."

"ಖೂನಿ ನಡೆದಾಗ ನೀವು ಮನೆಯಲ್ಲಿಯೇ ಇದ್ದೆಯಲ್ಲಿವೆ. ?"

"ಖೂನಿ ನಡೆದಿದ್ದು ನನಗೆ ಗೊತ್ತಿಲ್ಲ ರಾವಸಾಬ"

"ಹಾಗಾದರೆ ನಿಮ್ಮ ಯಜಮಾನಿತಿ ತಾನೇ ಸತ್ತುಹೋದಳೇನು?'

"ಅದು ಹೇಗೆ ಹೇಳಲಿಕ್ಕಾದೀತ ರಾವಸಾಬ ? ನಾನು ಅವರನ್ನು ನೋಡಿಲ್ಲ."

"ನೀನು ವಾಚಮನ್ ಎಂದರೆ ಮನೆಯಲ್ಲಿ ಏನು ಮಾಡುತ್ತಿದ್ದಿ?'

"ನಾನು ಮನೆಯಲ್ಲಿಯೇ ಇದ್ದೇ ರಾವಸಾಬ. ಮನೆಯ ಕಂಪೌಂ ಬಿಟ್ಟು ಹೊರಗೆ ಸಹ ಹೋಗಲಿಲ್ಲ."

"ಹಾಗಾದರೆ ನೀನು ಮಾಡಿದರಾಯಿತು. ವಾಚಮನ್ ಕೆಲಸ ಅಂದರೆ ಮೂಲೆಯಲ್ಲಿ ಹೋಗಿ ನಿದ್ರೆ ಮಾಡುವದೇ ?"

"ಅಲ್ಲ. ರಾವಸಾಬ"

"ಹಾಗಾದರೆ ಮಧ್ಯಾನ್ಹದಲ್ಲಿ ಗ್ಯಾರೇಜಿನಲ್ಲಿ ಮಲಗಿದ್ದೆಯಲ್ಲವೇ"

"ಹೌದು ರಾವಸಾಬ"

"ಎಷ್ಟೊತ್ತಿಗೆ ಮಲಗಿಕೊಂಡಿದ್ದೆ"

'ಸುಮಾರು ಹನ್ನೆರಡು ಘಂಟೆಗೆ ರಾವಸಾಬ'

'ಎಷ್ಟು ಘಂಟೆಗೆ ಎಚ್ಚರವಾದೆ'

'ಎರಡೂ ವರೆ ಆದಮೇಲೆ'

"ನೀನೇ ಎದ್ದೆಯೋ ?'

"ಅಲ್ಲ ರಾವಸಾಬ, ಸಂಣ ಯಜಮಾನತಿ ಬಂದು ಎಬ್ಬಿಸಿದಳು"

'ಇದೇ ಏನು ನೀನು ಮಾ

'ಅದು ತಪ್ಪು ರಾವಸಾಬ. ಆವರೆ ಏನೂ ಬೇರೆ ಕೆಲಸವಿದ್ದಿಲ್ಲ ಮಾತನಾಡಲಿಕ್ಕೂ ಯಾರೂ ಇದ್ದಿಲ್ಲ ಬೇಜಾರವಾಯಿತು. ಮಲಗಿಕೊಂಡಿದ್ದೆ

'ಪ್ರತಿದಿನ ಯಾರಕೂಡ ಮಾತನಾಡುತ್ತಿದ್ದೆ.'

'ಯಾರಕೂಡ ಅಂದರೇನು ರಾವಸಾಬ ಯುಜಮಾನತಿಯ ಕೂಡ ಇಲ್ಲವಾದರೆ ಅಡಗಿಯವಳ ಕೂಡ'

'ಈ ಹೊತ್ತು ಅಡಗಿಯವಳು ಎಷ್ಟು ಹೊತ್ತಿಗೆ ಹೋದಳು ಮನೆಯಿಂದ'

'ಈ ಹೊತ್ತು ಅವಳಿಗೆ ರಜೆ ರಾವಸಾಬ ಅವಳು ಬಂದಿರಲಿಲ್ಲ'

'ಹಾಗಾದರೆ ನಿಮ್ಮ ಯಜಮಾನತಿಯವರಿಗೂ ಊಟಕ್ಕೆ ರಜೆಏನು

'ಅವರಿಗೇನು ರಾವಸಾಬ ಎಲ್ಲಿಯಾದರೂ ಪಾರ್ಟಿ ಇರುತ್ತದೆ'

" ಪ್ರತಿ ರವಿವಾರ ಇರುತ್ತದೇನು ಪಾರ್ಟಿ "

' ಹೌದು ರಾವಸಾಬ '

' ನಿನ್ನ ಮನೆಯಲ್ಲಿ '

" ನನಗೆ ಮನೆಯಿಲ್ಲ ರಾವಸಾಬ "

' ಹಾಗಾದರೆ ? '

" ನಾನು ನಮ್ಮ ಯಜಮಾನತಿಯ ಮನೆಯಲ್ಲಿ ಇರುತ್ತೇನೆ "

" ಊಟ ಎಲ್ಲಿ ಮಾಡುತ್ತಿ "

' ಮನೆಯಲ್ಲಿಯೇ ಮಾಡುತ್ತೇನೆ '

' ಹಾಗಾದರೆ ಆದಿತ್ಯವಾರ ಏನು ಮಾಡುತ್ತಿ '

' ಹೊಟಲಿಗೆ ಹೋಗುತ್ತೇನೆ. ಯಾವಾಗಾದರೊಮ್ಮೆ ಆದರೆ ನನ್ನ ತಂಗಿಯ ಮನೆಗೆ ಹೋಗುವದು ಹೆಚ್ಚು '

' ಈ ದಿವಸ ನಿನ್ನ ತಂಗಿಯ ಮನೆಗೆ ಊಟಕ್ಕೆ ಹೋಗಿದ್ದೆಲ್ಲವೆ '

" ಇಲ್ಲ. ರಾವಸಾಬ ಹಾಗಿಯೇ ಮಾತನಾಡಿಸಿ ಬರಲು ಹೋಗಿದ್ದೆ

" ಹಾಗಾದರೆ ಊಟಕ್ಕೆ ಹೋಗಿದ್ದೇನು ಹೋಟಲಿಗೆ. "

ಹೌದು ರಾವಸಾಬ

ಎಷ್ಟೊತ್ತಿಗೆ ಹೋಗಿದ್ದೀ.

ಹನ್ನೆರಡು ಹೊಡೆದ ಕೂಡಲೆ ಹೋದೆ.

ತಿರುಗಿ ಎಷ್ಟೊತ್ತಿಗೆ ಬಂದೆ.

ಒಂದು ಘಂಟೆಗೆ.

ಹೋಗುವಾಗಮ ನೆಯಲ್ಲಿ ಯಾರೂ ಇದ್ದರು.

ದೊಡ್ಡ ಯಜಮಾನತಿ ಒಬ್ಬರೇ ಇದ್ದರು.

ಯಾರಾದರೂ ಭೆಟ್ಟಿ ಯಾಗಲಿಕ್ಕೆ ಬಂದಿದ್ದರೇನು. ಆಗ.

ಆಗ ಯಾರೂ ಇಲ್ಲ ರಾವಸಾಬ. ಮುಂಜಾನೆ ಮಾತ್ರ ಯಾರೋ ಮೂರು ನಾಲ್ಕು ಹೆಂಣು ಮಕ್ಕಳು ಬಂದು ಹತ್ತು ಮಿನಿಟು ಕುಳಿತುಹೋದರು

ನೀನು ಊಟ ಮಾಡಲಿಕ್ಕೆ ಹೋಗುವ ಮುಂದೆ ನಿಮ್ಮ ಯಜಮಾನತಿಗೆ ಹೇಳಿ ಹೋದೆ ಏನು.

ಅಹುದು ರಾವಸಾಬ ಅವರನ್ನು ಕೇಳಿಯೇ ಹೋದೆ.

ಊಟ ಮಾಡಿ ಬಂದಮೇಲೆ ಅವರಿಗೆ ಭೆಟ್ಟಿಯಾದಿಯೇನು.

ಇಲ್ಲ ರಾವಸಾಬ.

ಏಕೆ.

ಊಟ ಬಹಳ ಆಗಿತ್ತು ನಿದ್ದೆಯೂ ಬಹಳ ಬಂದು ಬಿಟ್ಟಿತ್ತು ಹೋಗಿ ಗ್ಯಾರೇಜಿನಲ್ಲಿ ಮಲಗಿ ಬಿಟ್ಟೆ.

ನಿಮ್ಮ ಚಿಕ್ಕ ಯಜಮಾನತಿಯು ಯಾವಾಗ ಹೊರಗೆ ಹೋಗಿದ್ದಳು

ಹನ್ನೊಂದರ ಸುಮಾರಿಗೆ ರಾವಸಾಬ.

ಹೋಗುವಾಗ ಕಾರು ತೆಗೆದುಕೊಂಡು ಹೋದಳೆ.

ಹೌದು ರಾವಸಾಬ. ಆದರೆ ಗೇಟು ದಾಟುವಷ್ಟರಲ್ಲಿ ಕದಕ್ಕೆ ಹಾಯಿಸಿಬಿಟ್ಟರು ಮೆಟ್ ಗಾರ್ಡ ಮಣಿದು ಹೋಯಿತು.

ತಿರುಗಿ ಎಷ್ಟೊತ್ತಿಗೆ ಬಂದರು.

ಎರಡು ವರೆ ಆಗಿರಬೇಕು.

" ಚಿಕ್ಕ ಯಜಮಾನತಿ ಹೊರಗೆ ಹೋದ ಮೇಲೆ ಮನೆಗೆ ಮತ್ತೆ ಯಾರು ಬಂದಿದ್ದರು. "

' ಯಾರೂ ಇಲ್ಲ. ರಾವಸಾಬ '

' ನಿಮ್ಮ ದೊಡ್ಡ ಯಜಮಾನತಿ ಚೀರಿಕೊಂಡದ್ದು ನಿನಗೆ ಕೇಳಿಸಲಿಲ್ಲವೇನು. '

" ಇಲ್ಲ ರಾವಸಾಬ "

" ನಿದ್ರೆಯಲ್ಲಿದ್ದಿಯೆಂದು ಕೇಳಿಸಲಿಲ್ಲವೋ ಅಥವಾ........ ? "

' ಬೇಕಾದಷ್ಟು ನಿದ್ರೆಯಲ್ಲಿದ್ದರೂ ನಾನು ಸ್ವಲ್ಪ ಸಪ್ಪಳಕ್ಕೆ ಒಮ್ಮೆಲೆ ಎಚ್ಚರಾಗುತ್ತೇನೆ. ರಾವಸಾಬ ಮಿಲಿಟರಿಯಲ್ಲಿ ಕ್ಯಾಂಪ ಗಾರ್ಡ ಆಗಿದ್ದೆ ನಾನು. "

" ಇರಲಿ. ನೀನಿಲ್ಲದ ವೇಳೆಯಲ್ಲಿ ಅಥವಾ ನೀನು ಮಲಗಿಕೊಂಡ ವೇಳೆಯಲ್ಲಿ ಅಡಗಿಯವಳೇಕೆ ನಿಮ್ಮ ಯಜಮಾನತಿಯನ್ನು ಕೊಲೆ ಮಾಡಿರಬಾರದು. '

' ಅವಳೇಕೆ ಕೊಲೆ ಮಾಡಬೇಕು ರಾವಸಾಬ ?"

' ಹಣಕ್ಕಾಗಿ '

' ಛೇ ಅದು ಸಾಧ್ಯವಿಲ್ಲ ರಾವಸಾಬ "

' ಯಾರಾದರೂ ಅವಳಿಗೆ ಕೊಲೆಮಾಡಲು ಹೇಳಿರಬೇಕು. '

" ನನಗೆ ಹೇಗೆ ಅದು ಗೊತ್ತಾಗಬೇಕು "

" ಹೇಗೆ ಅಂದರೆ ! ಇಬ್ಬರೂ ಒಂದೇ ಮನೆಯಲ್ಲಿ ದುಡಿಯುತ್ತಿರಿ ಇಬ್ಬರು ಕೂಡಿಯೇ ಮಾತನಾಡುತ್ತೀರಿ ಅಂದಮೇಲೆಗೊತ್ತಾಗುವದಿಲ್ಲವೇನು

" ಸಾಧ್ಯವಿಲ್ಲ ರಾವಸಾಬ "

" ಯಾಕೆ ಸಾಧ್ಯವಿಲ್ಲ ನೀವಿಬ್ಬರು ಕೂಡಿಯೇ ಒಳಸಂಚುಹೂಡಿ ಕೊಲೆ ಮಾಡಿದ್ದಿರೆಂದು ನಾನು ತಿಳಿತ್ತೇನೆ. ಎಂದವರೇ ಅವನ ಕೈಯನ್ನು ಒಮ್ಮೆಲೆ ಭದ್ರವಾಗಿ ಹಿಡಿದುಕೊಂಡು ತಮ್ಮೆಡಗೆ ಎಳೆದುಕೊಂಡರು. ಹಾಗು ಅವನ ಮುಖದಲ್ಲಿ ಕಂಣುಗಳನ್ನು ತೀಕ್ಷ್ಣತೆಯಿಂದ ದೃಷ್ಟಿಸಿದರು ಆದರೆ ರಜಾಕನ ಕೈ ಕಬ್ಬಿಣದಲ್ಲಿ ಗಡ್ಡಿಯಾಗಿತ್ತು ನರಗಳು ಮಾತ್ರ ಉಬ್ಬಿ ಹೊರಗೆ ಕಾಣುತ್ತಿದ್ದವು ಆದರೆ ನಡುಕವೇನೂ ಇರಲಿಲ್ಲ. ಅವನ ಮುಖದಲ್ಲಿ ಅಂಜಿದ ಕಳೆಯೇನೂ ವ್ಯಕ್ತವಾಗಲಿಲ್ಲ ಅವನು ಕೂಡಲೇ ಉತ್ತರಿಸಿದನು.

" ನೀವು ತಪ್ಪು ತಿಳಿದುಕೊಂಡಿದ್ದೀರಿ. ರಾವಸಾಬ "

" ಹಾಗೇನಿಲ್ಲ ನಿನ್ನ ಬಗ್ಗೆ ಈಗಾಗಲೇ ನಾನು ಸಾಕ್ಷಿದಾರರನ್ನು ತರಿಸಿದ್ದೇನೆ ತಿಳಿಯಿತೆ ? "

" ಹಾಗಾದರೆ ಅದು ಸುಳ್ಳು ಸಾಕ್ಷಿವಿರಬೇಕು ರಾವಸಾಬ ಬಡವರನ್ನು ಸಾಯಿಸಬೇಕೆಂದು ತಮ್ಮ ಉದ್ದೇಶವಿದೆಯೆಂದು ಕಾಣುತ್ತದೆ. "

"ಇಲ್ಲ ನಿರಫರಾದಿಗಳನ್ನು ಉಳಿಸಬೇಕೆಂದು ನಾನು ಯತ್ನಿಸುವೆನು ಆದರೆ ನೀನೇ ಸುಳ್ಳು ಹೇಳಿ ಸಿಕ್ಕಿ ಹಾಕಿಕೊಳ್ಳುತೀ, ಅಲ್ಲವೆ ? "

' ತಾವು ಹೇಳುವದೇ ವಿಚಿತ್ರವಾಗಿ ಕಾಣಿಸುತ್ತದೆ ರಾವಸಾಬ '

' ಆದರೆ ಅದು ನಿಜವದೆ. ಕೊಲೆಯನ್ನು ನೀನೇ ಮಾಡಿ ಪಾರಾಗಬೇಕೆಂದಿದ್ದೀಯಲ್ಲ ಹೇಗೆ ಪಾರಾಗುತ್ತೆಯೋ ನೋಡೋಣ '

' ಕೊಲೆ ಮಾಡಿದ್ದರೆ ಪಾರಾಗಲಿಕ್ಕೆ ಪ್ರಯತ್ನ ಇಲ್ಲವೇ ರಾವಸಾಬ

' ಹಾಗಾದರೆ ನೀನು ಮಾತನಾಡುತ್ತಿರುವ ಅರ್ಥವೇನು. '

' ನಾನು ತಿಳಿದಷ್ಟೆ ಹೇಳಿದೆ ರಾವಸಾಬ ತಪ್ಪಿದ್ದರೆ ಕ್ಷಮಿಸಬೇಕು

ಕ್ಷಮೆಯ ಮಾತಿರಲಿ ನೀನು ಎಷ್ಟು ವರ್ಷಗಳಿಂದ ಅವರ ಮನೆಯ ನೌಕರಿ ಇದ್ದೀ '

' ಎರಡು ವರ್ಷಗಳಿಂದ '

" ನೀನು ವಾಚಮನ್ ಅಂದಮೇಲೆ ಮನೆಗೆ ಬರುಹೋಗುವವರ ಮೇಲೆಲ್ಲ ಕಣ್ಣಿಡುತ್ತಿದ್ದೆಯಲ್ಲವೇ ?"

' ಇಲ್ಲ ರಾವಸಾಬ ಒಳಗೆ ಹೊಸಬರು ಬಂದರೆ ಅವರು ಹೊರಗೆ ಹೋಗುವದನ್ನು ಮಾತ್ರ ನೋಡುತ್ತಿದ್ದೆ. ಅಷ್ಟೆ '

" ಈಗಾಗ ಹೆಚ್ಚಾಗಿ ಯಾರಾರು ಮನೆಗೆ ಬರುತ್ತಿದ್ದರು. ?"

" ನಾನೇಗೆ ಹೇಳಲಿ ರಾವಸಾಬ ನಾನು ಯಾರ ಹೆಸರು ಕೇಳಿಲ್ಲ"

" ಯಾರಾದಾರೂ ಗುರ್ತು ಇರಬೇಕಲ್ಲವೇ ?'

" ಯಾರದೂ ಗುರ್ತು ಇಡಲು ಸಾಧ್ಯವಿಲ್ಲ ರಾವಸಾಬ."

" ಯಾರೇ ನಿನಗೆ ಯಾರೂ ಹಣ ಕೊಡುತ್ತಿದ್ದಿಲ್ಲೇನು ಸಲಾಂ ಮಾಡಿದಕೊಡಲೇ ?"

" ನಾನು ಕಾಸಿಗಾಗಿ ಸಲಾಂ ಮಾಡುವದಿಲ್ಲ ರಾವಸಾಬ. ನನಗೆ ಹಣದ ಅವಶ್ಯವಿಲ್ಲ ಅಷ್ಟೇಕೆ ನನಗೇನು ಹೆಂಡಿರು ಮಕ್ಕಳಿಲ್ಲ.'

" ಮತ್ತೆ ಏಕೆ ಸುಳ್ಳು ಹೇಳುತ್ತೀ ? ನಿನಗೆ ಎಲ್ಲ ಜನರ ಪರಿಚಯ ಇದ್ದೆ ಇರುತ್ತದೆ. ನೀನು ಉದ್ದೇಶಪೂರ್ವಕವಾಗಿ ಮುಚ್ಚಿಡುತ್ತಿದ್ದೀ

" ಅದರಲ್ಲೇನು ಉದ್ದೇಶ ಬಂತು ರಾವಸಾಬ."

' ಏನು ಎಂಬುದು ಇನ್ನೆರಡು ದಿನಗಳಲ್ಲಿಯೇ ತಿಳಿಯುತ್ತದೆ ಆಗ ನನ್ನ ಹೆಸರಿನಿಂದ ಶಂಖ ಹೊಡೆಯಬೇಡ. ಆಯಿತೇ"

" ನಾನು ಬರಲೇ ರಾವಸಾಬ ? ಮಿಲಿಟರಿಸಲಾಂ ಹೊಡೆದು ಎದ್ದು ನಿಂತನು.

" ಹೇ. ಎಲ್ಲಿಗೆ ಹೋಗುತ್ತಿ. ನಿಲ್ಲು" ಎಂದವರೇ ಬೆಲ್ ಬಾರಿಸಿದರು. ಜವಾನ ಬಂದೊಡನೆ ಪೋಲೀಸರನ್ನು ಕರೆಸಿದರೂ. ಅವರಿಗೆ ಹೇಳಿದರು.

" ಇವನನ್ನು ನಿಮ್ಮ ತಾಬಾದಲ್ಲಿ ಇಟ್ಟು ಕೊಳ್ಳಿರಿ."

' ಅಪ್ಪಣೆ ರಾವಸಾಬ" ಎಂದು ಪೋಲೀಸನು ಸಲಾಂ ಹೊಡೆದು ರಜಾಕನನ್ನು ಎಳೆದುಕೊಂಡು ಹೊರಗೆ ಹೋದನು.

## ( ೮ )

ಸಿಂಗ್ ಪೆನ್ಸಿಲಿನಿಂದ ತಲೆಕೆರೆದುಕೊಂಡರು. ಕೊಲೆಯ ಬಗ್ಗೆ ಯಾವ ಜಾಡು ಸಿಗಲಿಲ್ಲ. ಬೆಲ್ ಬಾರಿಸಿದರು. ಜವಾನ ಬಂದ ಸೋಫಿಯಾ ಅವರನ್ನು ಬರಹೇಳು. ಎಂದು ಹೇಳಿದರು ಸೋಫಿಯಾ ಬರುವಷ್ಟರಲ್ಲಿಯೇ ಅವಳ ಮುಖ ಕಳೆಗುಂದಿತ್ತು. ಅವಳಿಗೆ ಹಸಿವೆ, ನೀರಡಿಕೆಗಳೆರಡೂ ಆಗಿದ್ದವು. ಸಿಂಗ ಅದನ್ನು ಕಂಡುಕೊಂಡು ನೀವುಗೇನಾದರೂ ಉಪಹಾರ ಬೇಕಾದರೆ ಆರ್ಡರ ಕೊಟ್ಟು ತರಿಸಬಹುದು. ನಿಮ್ಮ ಕೆಲಸ ಇನ್ನೊಂದು ಘಂಟೆಯ ಒಳಗೆ ಮುಗಿದು ಹೋಗುತ್ತದೆ ಎಂದರು.

" ಹಾಗಾದರೆ ಸ್ವಲ್ಪ ಸಹಾಯ ಕೇಳುತ್ತೇನೆ. ನಿಮ್ಮ ಜವಾನನಿಗೆ ಹೇಳಿ ಕಳಿಸಿರಿ ಸಮೀಪದ ರೆಸ್ಟೋರೆಂಟಿಗೆ ನಾನು ಬಿಲ್ ಕೊಡುತ್ತೇನೆ. " ಎಂದಳು.

ಸಿಂಗ ಹಾಗೆಯೇ ಮಾಡಿದರು ನಂತರ ಒಳಗೆ ಬಂದು ಡ್ರಾಲಿನ ಕೀಲಿ ತೆಗೆದು ದೊಡ್ಡದಾದ ಒಂದು ಫೈಲನ್ನು ಎತ್ತಿಕೊಂಡು ಇಲ್ಲಿ ಬರ್‍ರಿ ಮಿಸ್ ಸೋಫಿಯಾ. ಇದರಲ್ಲಿ ಪ್ರತಿಪುಟದಲ್ಲಿಯೂ ಫೋಟೋಗಳಿವೆ. ನೀವು ಎಲ್ಲವನ್ನು ನೋಡಿ, ಸಂಶಯ ಬಂದ ಫೋಟೋವನ್ನು ನನಗೆ ತೋರಿಸಿರಿ ನಾನೂ ಸ್ವಲ್ಪ ಕಾಗದಪತ್ರ ನೋಡುತ್ತೇನೆ. ಎಂದರು.

ಇಬ್ಬರೂ ತಮ್ಮ ತಮ್ಮ ಕೆಲಸದಲ್ಲಿ ಮಗ್ನರಾದರು ರೆಸ್ಟೋರೆಂಟಿನ ಉಪಹಾರವನ್ನು ಮುಗಿಸಿ, ಬಿಲ್ಲು ಕೊಟ್ಟು ಸೋಫಿಯಾ ಹೇಳಿದಳು.

"ಇನ್ಸಪೆಕ್ಟರಸಾಬ ಈ ಮೂರು ಚಿತ್ರಗಳ ಬಗ್ಗೆ ನನ್ನಅನುಮಾನವಿದೆ"

" ಥ್ಯಾಂಕ್ಸ ಮಿಸ್ ಸೋಫಿಯಾ " ಎಂಬವರೇ ಸಿಂಗ ಖುರ್ಚಿಯಿಂದೆದ್ದು ಬಂದು ಆ ಚಿತ್ರಗಳಿದ್ದ ಪುಟಗಳಿಗೆ ಬಿಳಿಹಾಳಿಯ ತುಣುಕುಗಳನ್ನು ಟಾಚಣಿಗಳಿಂದ ಅಂಟಿಸಿ ಅವಕ್ಕೆ ಎ. ಬಿ. ಸಿ. ಎಂದು ಕೆಂಪು ಪೆನ್ಸಿಲಿನಿಂದ ಗುರುತುಮಾಡಿದರು. ಮಿಸ್ ಸೋಫಿಯಾ ವಾಚು ನೋಡಿಕೊಂಡಳು. ಸಿಂಗರು ಕೂಡ ವಾಚು ನೋಡಿಕೊಂಡು ' ಮಿಸ್ ಸೋಫಿಯಾ ' ನಿವೀಗ

ಹೋಗಬಹುದು. ಆದರೆ ನೀವು ನಮ್ಮ ನಜರ ಬಂದಿಯಲ್ಲಿರಬೇಕಾಗುವದು ನೀವು ಮನೆಬಿಟ್ಟು ಹೊರಗೆ ಹೋಗುವಂತಿಲ್ಲ ನಮ್ಮಿಂದ ಆಜ್ಞೆ ಬರುವವ ರೆಗೂ " ಎಂದು ಹೇಳಿ ಬೆಲ್ ಬಾರಿಸಿದರು. ಜವಾನ ಬಂದೊಡನೆ ಇಬ್ಬರು ಕಾನ್ಸ ಟೇಬಲಿರನ್ನು ಕರೆದು ' ಈ ಬಾಯಿಯವರನ್ನು ಮನೆಗೆ ಲಾರಿಯಲ್ಲಿ ಕರೆದುಕೊಂಡು ಹೋಗಿ ಬಿಡಿರಿ ಹಾಗು ಸರತಿಯ ಪ್ರಕಾರ ಇಬ್ಬಿಬ್ಬರು ಆವರ ಮನೆಯನ್ನು ಕಾಯುತ್ತಾ ಇರ್ರಿ " ಎಂದು ಆಜ್ಞೆಕೊಟ್ಟರು. ಕಾನ್ಸ ಟೇಬಲರಿಬ್ಬರೂ ಅಚ್ಛಾ ರಾವಸಾಬ ಎಂದು ಸಲಾಂ ಹೊಡೆದು ಮಿಸ್ ಸೋಫಿಯಾಳನ್ನು ಕರೆದುಕೊಂಡ.ಹೋಗಿ ಲಾರಿಯಲ್ಲಿ ಕೂಡ್ರಿಸಿ ಶ್ರೀನಿವಾ ಸಕ್ಕೆ ಬಂದರು ಅಲ್ಲಿದ್ದ ಇಬ್ಬರು ಸೆಂಟ್ರಿಗಳಿಗೆ ಇನ್ಸಪೆಕ್ಟರರ ಆಜ್ಞೆಯನ್ನು ತಿಳಿಸಿದರು. ಹಾಗು ಬೆಳಕಿನಲ್ಲಿ ಎಂಟು ಘಂಟೆಗೆ ಬಂದು ತಮ್ಮನ್ನು ವಿಶ್ರಾಂ ತಿಗೆ ಬಿಡಬೇಕೆಂದೂ ಪರಸ್ಪರ ಒಪ್ಪಂದು ಮಾಡಿಕೊಂಡರು.

ಇನ್ಸಪೆಕ್ಟರ ಸಿಂಗ ಆ ಫೈಲನ್ನು ತೆಗೆದು ಮೂವರ ವ್ಯಕ್ತಿಯ ಭಾವ ಚಿತ್ರಗಳನ್ನು ನೋಡುತ್ತ ಕುಳಿತರು ಮೂವರೂ ಹೆಸರಾಂತ ದರೋಡಿಗಾ ರರು. ಇಬ್ಬರೂ ಪಿಕ್ ಪಾಕೇಟ ಪ್ರಕರಣಗಳಲ್ಲಿ ಜೇಲು ಯಾತ್ರೆ ಮಾಡಿ ದವರು ಒಬ್ಬನು ಮಾತ್ರ ಕೊಲೆ ಪಾತಕಿಯಾಗಿದ್ದು ಅವನಿನ್ನೂ ಕೈಗೆ ಸಿಕ್ಕಿ ರಲಿಲ್ಲ ನೋಟ್ಸುಗಳನ್ನು ಬಿಳಿ ಹಾಳೆಯ ಮೇಲೆ ಗೀಚಿದರು. ಅಷ್ಟರಲ್ಲಿ ವ್ಹಿಜಿ ಟಿಂಗ ಕಾರ್ಡು ಬಂದಿತು. ಚಂದ್ರಮೋಹನ ರಾಯ್‌ನಿಂದಿ ಮೊದಲೇ ಬೇ ಜಾರಗೊಂಡ ಇನ್ಸಪೆಕ್ಟರರಿಗೆ ತಾಳ್ಮೆ ಉಳಿದಿರಲಿಲ್ಲ. ಈ ಪತ್ರಿಕಾ ಕರ್ತನಾ ನ ಪೀಡೆಯೊಂದು ಎಂಥವರೇ ಒಂದು ಚೂರು ಕಾಗದ ತಕ್ಕೊಂಡು ಈಗ ಸಂಭಾಷಣೆಗೆ ಅವಕಾಶವಿಲ್ಲ ನಾಳೆ ಮುಂಜಾನೆ ಹನ್ನೊಂದು ಘಂಟೆ ಯ ಒಳಗೆ ಭೆಟ್ಟಿಯಾದರೆ ಅಡ್ಡಿಯಿಲ್ಲ ಎಂದು ಬರೆದು ಕಳಿಸಿದರು ಕಚೇ ರಿಯ ಘಂಟೆ ಒಂಬತ್ತನ್ನು ಸೂಚಿಸಿತು ಸಿಂಗ ಎದ್ದೆ ಬಿಟ್ಟರು.

( ೯ )

ಮತ್ತೆ ಚಮನಲಾಲ ?

ಚಮನಲಾಲನೇ ಮಧ್ಯಾಹ್ನದಲ್ಲಿ ಸುಸ್ತಾಗಿ ಒಂದೂವರೆ ಗಂಟೆಗೆ ಕಾರನ್ನು ಜೋರಿನಿಂದ ಹೊಡೆದುಕೊಂಡು ಮನೆ ತಲುಪಿದನು. ಅವನಿಗೆ ವಿಪರೀತ ಹಸಿವಾಗಿತ್ತು ಹೋದವನೇ ಕಾರನ್ನು ನಿಲ್ಲಿಸಿ ಬಟ್ಟೆಬದಲಾಯಿಸಿ ಎರಡನೆಯ ಸ್ನಾನ ಮಾಡಿಕೊಂಡು ಊಟ ಮಾಡಿ ಮಲಗಿಕೊಂಡು ಬಿಟ್ಟ ರು. ನಾಲ್ಕು ಘಂಟೆಗೆ ಎಚ್ಚರಗೊಂಡು ಚಹ ಕುಡಿದು ಅಂಣ ಮನಹರ ಲಾಲನನ್ನು ಕಂಡನು. ಅವನೊಡನೆ ಆ ಸುದ್ದಿ ಈ ಸುದ್ದಿ ಮಾತನಾಡು ತ್ತ ಕೊನೆಗೆ ಬಚ್ಚಿಟ್ಟ ವಿಷಯಗಳನ್ನು ಸುರಿಸಿದನು.

ನಾನು ಕಲ್ಕತ್ತಾಕ್ಕೆ ಹೋಗುತ್ತೇನೆ ಅಂಣಾ.

ಈಗೆಕೇ ಕೆಲಸವಿಲ್ಲದೆ ?

ನನಗೆ ಜರೂರ ಕೆಲಸವಿದೆ.

ಅದೆಂತಹಕೆಲಸವಪ್ಪ. ಕುದುರೆಯಹಣ ಹಾಳುಮಾಡಲ್ಲಿಕ್ಕಿಅಹುದಲ್ಲೊ

" ಅಲ್ಲ ಅಲ್ಲ ನಾನೆಂದು ಹಣ ದುರುಪಯೋಗ ಮಾಡುವದಿಲ್ಲ "

" ಸದುಪಯೋಗವನ್ನೆಂದಾದರೂ ಮಾಡಿದ್ದು ನಿನಗೆ ಗೊತ್ತಿದೆಯೇ"

ಅದು ಗೊತ್ತಿಲ್ಲ. ನೀನೆ ಚನ್ನಾಗಿ ಲೆಕ್ಕ ಪತ್ರ ಇಟ್ಟಿರುತ್ತಿಯೆಂದ ಮೇಲೆ ಹಾಗು ನಿನ್ನ ಮೇಲೆ ನನ್ನ ಸಂಪೂರ್ಣ ವಿಶ್ವಾಸವಿದೆಯೆಂದ ಮೇಲೆ ನಾನೀಗ ಲೆಕ್ಕಾಚಾರದ ಭಾರ ಹೊರಬೇಕು.

ನೀನೊಬ್ಬ ಅವಿವೇಕಿ ಹೋಗಲಿ. ಈಗ ಕಲ್ಕತ್ತೆಗೆ ಏಕೆ ಓಡಿ ಹೋಗುತ್ತಿದ್ದೀ ?

"ಓಡಿ ಹೋಗುತ್ತಿದ್ದಿ ನಾನೇನೂ ಯಾರಿಗೂ ಅಂಜಬೇಕಿಲ್ಲ"

" ಅಂದರೆ ?'

"ಮಾತ್ತೇನು ನಿಮ್ಮ ಮಾತಿನ ಅರ್ಥ ?"

"ಚಮನ. ಸುಮ್ಮನೆ ಏಕೆ ತಗಾದೆಇಳಿಯುತ್ತಿ ನೀನು ಕಲ್ಕತ್ತೆ

ಗಾದರೂ ಹೋಗು ಪ್ಯಾರಿಸಿಗಾದರೂ ಹೋಗು ಹಣ ತೀರುವ ವರೆಗೆ ನಾನು ಹೇಳಿದಂತೆ ನೀನೇಕೆ ಕೇಳಬೇಕು ?"

"ಅಂದರೆ ಹಣ ವಿಲ್ಲದಾಗ ಹಾಗೂ ಹಣಬೇಕಾದಾಗ ಮಾತ್ರ ನಾನು ನಿಮ್ಮ ಅಡಿಯಾಳಾಗಿರಬೇಕೇನು ?'

" ಅಡಿಯಾಳಾಗುವ ಪ್ರಶ್ನೆ ಬರಲಿಲ್ಲ ನೀನು ಸದಾಸ್ವತಂತ್ರನಿದ್ದೀ ಬಹಳ ಬುದ್ಧಿಯು ಬೆಳೆದುಬಿಟ್ಟಿದೆ ಇತ್ತೀಚೆಗೆ ಹೋಗಲಿ ಕಲ್ಕತ್ತೆಗೆ ಏಕೆ ಹೋಗುವದು ಎಂಬುದಕ್ಕೆ ನೀನೇನೂ ಕಾರಣ ಹೇಳಲಿಲ್ಲ ತಿರುಗಿ ಮುಂಬಯಿಗೆ ಬರುವ ಯೋಜನೆಯಾದರೂ ಇದೆಯೇ ತಲೆಯೊಳಗೆ ?'

" ನೋಡುತ್ತೇನೆ ಸಾಧ್ಯವಾದಷ್ಟು ತೀವ್ರ ಬರುತ್ತೇನೆ. ಹೆಚ್ಚು ಕಾಲು ನಿಲ್ಲಲು ಇಚ್ಛೆ ಇಲ್ಲ."

"ಆಗಲಿ ನಿನ್ನ ಇಚ್ಛೆಯೆನೋ ನಿನ್ನ ಕೆಲಸವೇನೊ? ಯಾವಾಗ ಹೋಗುತ್ತಿ?"

" ಈಗಾಲೇ ರಾತ್ರಿ ವಿಮಾನದಿಂದ.'

" ವಿಮಾನದಿಂದ ಹೋಗುತ್ತಿಯಾ ಅದೆಂತಹ ಜರೂರಿ ಕೆಲಸವಪ್ಪ ಮಿನಿಸ್ಟರ ಕೂಡ ನಿನ್ನನ್ನು ನೋಡಿ ಬೆರಗುಕಚ್ಚಬೇಕು."

" ನನ್ನ ಕೆಲಸದ ಜರೂರಿ ನಿಮಗೆ ಅರ್ಥವಾಗುವದಿಲ್ಲ. ಏಕೆ ಸುಮ್ಮನೆ ಟೀಕೆ ಮಾಡುತ್ತೀರಿ. ?'

" ನಿಜವಪ್ಪಾ. ನೀನು ಏನೆಂದು ಹೇಳದೇಇದ್ದರೆ ಅರ್ಥವಾದರೂ ಹೇಗೆಆಗಬೇಕು ?"

ಕೆಲಕ್ಷಣ ಇಬ್ಬರೂ ಸುಮ್ಮನಾದರು. ಮಾತು ಬೆಳೆಸುವದಕ್ಕೆ. ಚಮನಲಾಲನಿಗೆ ಇಚ್ಛೆಇರಲಿಲ್ಲ ಅವನಿಗೆ ಮನಹರಲಾಲ ಗುಣಗಳಲ್ಲಿ ಗೊತ್ತಿದ್ದಿತು. ಪ್ರತಿಯೊಂದು ವಿಷಯವನ್ನೂ ಹತ್ತಿಯಂತೆ ಹಿಂಜಿ ಹಿಂಜಿ ನೋಡುವವ. ಆದರೆ ಮನಹರಲಾಲನಿಗೆ ಚಮನಲಾನ ಪ್ರವಾಸದ ಉದ್ದೇಶವನ್ನು ಅರಿತುಕೊಳ್ಳಬೇಕೆಂದು ಕುತೂಹಲ ಆದರೆ ಚಮನ ಹೇಳನೊಲ್ಲ. ಆದರೂ ಕೇಳಿದ.

" ಇರಲಿ ಚಮನ್. ಪ್ರವಾಸದೊಂದಿಗೆ ಮತ್ತಾರೂ ಬರುತ್ತಾರೆ ?"

" ಯಾರಿಲ್ಲ ನಾನೊಬ್ಬನೇ ಹೋಗುತ್ತಿದ್ದೇನೆ."

" ನಿನ್ನ ಮಿತ್ರ ರಣಜಿತ ಬರುವದಿಲ್ಲವೇನು ?"

"ನನ್ನ ಖಾಸಗಿ ಕೆಲಸಕ್ಕೆ ಅವರು ಏಕೆ ಬರಬೇಕು ?"

"ಓಹೋ ಹೀಗೆ ಬೇರೆ ಇದೆಯೇನು ? ಖಾಸಗಿ ಕೆಲಸವೆಂದ ಮೇಲೆ ನಾನು ಕೊಡ ಕೇಳುವ ಅಧಿಕಾರವಿಲ್ಲ ವಿಮಾನದಿಂದ ರಾತ್ರಿ ಏಕೆ ಹೋಗಬೇಕು. ಬೆಳಗಿನಲ್ಲಿ ಹೋದರಾಗುತ್ತಿರಲಿಲ್ಲವೆ ?"

"ಹಾಗೇಯೇ ಮಾಡಬೇಕೆಂದಿದ್ದೆ. ಆದರೆ ನಾನು ಅಲ್ಲಿ ಮುಂಜಾನೆಯೇ ಇರಬೇಕೆಂದಿದ್ದುದರಿಂದ ಈ ಹೊತ್ತು ಮಧ್ಯಾಹ್ನ ಕಾರ್ಯಕ್ರಮ ಬದಲಾಯಿಸದೆ. "

"ನೀನು ತಿಳಿದಂತೆ ಮಾಡು ನನಗೇಕೆ ಈ ವಿಷಯ ಹೇಳಲಿಕ್ಕೆ ಬಂದೆ?"

"ನಾನು ಓಡಿ ಹೋದನೆಂದು ನೀನು ಪ್ರತಿಕೆಗಳಲ್ಲಿ ಪ್ರಕಟನೆ ಕೊಡಬಾರದೆಂದು. "

"ಇಷ್ಟೆ ತಾನೆ ಸರಿ. ನೀನು ಸುಖವಾಗಿ ಹೋಗಹುದು, "

ಮಾತು ಅಷ್ಟಕ್ಕೆ ಮುಕ್ತಾಯಗೊಂಡಿತು ಮನಹರಲಾಲ ಎದ್ದು ಹೊರಟು ಹೋದನು. ಆವನೆ ಮುಖದಲ್ಲಿ ಅತೃಪ್ತಿಯ ಚಿನ್ನ ಮೂಡಿದ್ದಿತು.

ಚಮನಲಾಲನು ಎದ್ದು ತನ್ನ ಕೋಣೆಗೆ ಹೋಗಿ ಒಂದು ಸೂಟಕೇಸಿನಲ್ಲಿ ಉಳಿದ ನೋಟಿನ ಕಟ್ಟುಗಳನ್ನು ಹಾಕಿ ಕೆಲ ಬಟ್ಟೆ ಬರೆಗಳನ್ನು ಹಾಕಿಕೊಂಡು ಸಿದ್ಧನಾದ. ಸಮುದನನ್ನು ಕರೆದು ಟಾಕ್ಸಿ ತರಲಿಕ್ಕೆ ಹೇಳಿದ

ಸಮುದನಿಗೆ ಆಶ್ಚರ್ಯವಾಯಿತು. ಮನೆಯಲ್ಲಿ ಎರಡು ಕಾರುಗಳಿವೆ. ಅದೇ ಹೋಸದಾಗಿ ತಂದ ಸ್ವಂತ ಕಾರು ಇದೆ. ಇಷ್ಟಿದ್ದು ಭಾಡಿಗೆಯದು ಯಾಕೆ ಬೇಕಾಯಿತು• ಎಂದು ಅವನಿಗೆ ಯೋಚನೆ. 'ಆಗಲಿ ಸೇಠ' ಎಂದು ಹೊರಟನು. ಹೊರಗೆ ಕಿಟಿಕೆಯಿಂದ ಮನಹರಲಾಲನು 'ಸಮುದ ಎಲ್ಲಿಗೆ ಹೊರಟೆ ?' ಎಂದು ಕರೆದನು. ಸಮುದ ಒಳಿಗೆ ಓಡಿ ಬಂದು ಮನಹರಲಾಲನಿಗೆ ವಿಷಯವನ್ನು ತಿಳಿಸಿದನು. ಮನಹರಲಾಲನಿಗೆ ಕೇಸ ಕೆರಳಿತು ತಮ್ಮನ ಅವಿವೇಕತನಕ್ಕೆ. ಒಮ್ಮೇಲೆ ಚಮನಲಾಲನ ಕೋಣೆಗೆ ಬಂದು ಏನಿದು ಹುಚ್ಚುಚ್ಚಾರ ಚಮನ ಮನೆಯಲ್ಲಿ ಕಾರಿದ್ದು ಟ್ಯಾಕ್ಸಿ ಹೇಳಿಕಳುಹಿಸಬೇಕಾಯ್ತು ? ಎಂದು ಕೇಳಿದನು.

ನಿಮಗೆ ಕಾರು ಈಗ ಹೊರಗೆ ಹೋಗಲಿಕ್ಕೆ ಬೇಕಾಗುತ್ತದೆ ನನ್ನ ಕಾರನ್ನು ನಾನೇ ತೆಗೆದುಕೊಂಡು ಹೋದರೆ ನಿಲ್ದಾಣದಿಂದ ಮರಳಿ ಮನೆಗೆ ತರುವವರಾರು.

ಅಂತೂ ದಿವ್ಯ ವಿಚಾರಪ್ಪ ಎಂದುಕೊಂಡು ಮರಳಿ ಹೋಗಿ ಬಿಟ್ಟರು.

ಸಮದ ಟಾಕ್ಸಿಯನ್ನು ತಂದು ಗೇಟಿಗೆ ನಿಲ್ಲಿಸಿದ. ಚಮನಲಾಲನ ಸೂಟ ಕೇಶನ್ನ ಒಯ್ದು ಟ್ಯಾಕ್ಸಿಯಲ್ಲಿಟ್ಟು ಚಮನಲಾಲನನ್ನು ಬೀಳ್ಕೊಟ್ಟಿ

ಮನಹರಲಾಲ ಅದೇ ಕಿಟಿಕಿಯಿಂದ ಟ್ಯಾಕ್ಸಿ ಹೋಗುವದನ್ನು ಕಂಣಿ ಮುಚ್ಚದೆ ನೋಡುತ್ತ ನಿಂತು ಬಿಟ್ಟ ಟ್ಯಾಕ್ಸಿಯು ನಿಮಿಷಾರ್ಧದಲ್ಲಿ ಅವ ನ ಕಂಣ ನೋಟದಿಂದ ಮಾಯವಾಗಿ ಹೋಗಿಬಿಟ್ಟಿತು. ಹಾಗೂ ಚಮ ನಲಾಲಕೂಡಾ ಎಂದಿಂದಿಗೂ ಅಗಲಿ ಹೋಗುವನೇ ಎಂಬ ಭಾವನೆ ಮನಹಾರಲಾಲನಿಗೆ ಉಂಟಾಯಿತು.



## ( ೧೦ )

ಸೋಮವಾರ ಮುಂಜಾನೆ ಹತ್ತು ಘಂಟೆಯಾಗಿರಬಹುದು ಶ್ರೀನಿವಾ ಸಕ್ಕೆ ಒಂದು ಸಾಯಕಲ್ಲ ಮೋಟರ ಬಂದು ನಿಂತಿತು ಅದರ ಮೇಲಿಂದ ಚಂದ್ರಮೋಹನರಾಯ ಇಳಿದು ಒಳಗೆ ಹೋಗಲು ಪ್ರಯತ್ನಿಸಿದನು ಆದ ರೆ ಗೇಟಿನಲ್ಲಿದ್ದ ಸೆಂಟ್ರಿಯ ಅವನನ್ನು ತಡೆದು ಪ್ರಶ್ನಿಸಿದನು ತಾವು ಯಾ ರು ಎಂಬುದನ್ನು ಇಲ್ಲಿ ತಿಳಿಸಬೇಡವೇ !

" ಓಹ್ ನಾನು ಚಂದ್ರಮೋಹನ ರಾಯ "

" ಅಂದರೆ ? ಇಲ್ಲೇನು ತಮ್ಮ ಕೆಲಸ "

" ನಾನು ಪತ್ರಿಕಾ ವರದಿಗಾರ ಇಲ್ಲಿ ನಿನ್ನೆ ಮಿಸ್ ಮಾಲಾಳ ಕೊಲೆ ಯಾಗಿದೆ ಆದರ ವಿವರಗಳನ್ನು ಅವಳ ತಂಗಿಯ ಮುಖದಿಂದ ಕೇಳಿ ಕೊಳ್ಳಲು ಬಂದಿದ್ದೇನೆ.

" ಎಲ್ಲಿದೆ ನಿಮ್ಮ ವ್ಹಿಜಿಟಿಂಗ ಕಾರ್ಡ ? "

' ಇದೊ ' ಎಂದು ಪ್ಲ್ಯಾಶ್ಟರ ಪಾಕೆಟ್‌ನಿಂದ ತೆಗೆದುಕೊಟ್ಟನು. ಪೋಲೀಸನು ಅವನನ್ನು ಒಳಗೆ ಬಿಟ್ಟನು ಚಂದ್ರಮೋಹನ್ನ ರಾಯ್ ಕಂಪೌಂಡಿನಲ್ಲಿ ಸೇರುತ್ತಲೇ ಕೈಚೀಲದೊಳಗಿಂದ ಒಂದು ದಪ್ಪನ್ನ ಕೇರೇನಾ ಚಿರೂಟನ್ನು ತೆಗೆದು ಹಲ್ಲುಗಳ ಮಧ್ಯಕಚ್ಚಿ ಬೆಂಕಿ ಹತ್ತಿಸಿದನು. ಹಾಗೂ ಒಳಗೆ ಹೋಗಿ ಮಿಸ್ ಸೋಫಿಯಾ ಕುಳಿತುಕೊಂಡಿದ್ದ ದಿವಾಣಖಾನೆಯನ್ನು ಪ್ರವೇಶಮಾಡಿದನು.

ತಾನೇ ತನ್ನ ಪರಿಚಯಿಮಾಡಿಕೊಡುತ್ತ ಸೋಫಿಯಾಳಿಗೆ ಹೇಳಿದನು ನಾನು ಸಿನೆ ಪತ್ರಿಕೆಯ ವರದಿಗಾರ ನಿನ್ನೆ ಇಲ್ಲಿ ಮಿಸ್ ಮಾಲಾಳ ಕೊಲೆಯಾಯಿತಂತೆ ಅದರಿಂದ ' ಭಾರತದ ಒಂದು ಅರ್ಘ್ಯರತ್ನ ಕಳೆದುಹೋದಂತಾಯಿತು. ಅದಕ್ಕೆ ಈವಾರ ನಮ್ಮಪತ್ರಿಕೆಯಲ್ಲಿ ಸಂತಾಪ ಸೂಚಿಸುತ್ತೇವೆ

" ಇದೇ ಸಂತಾಪವಲ್ಲವೆ ನೀವು ತೋಡಿಕೊಳ್ಳುವದು ?" ಎಂದು ಮಿಸ್‌ಸೋಫಿಯಾ ದಿನ ಪತ್ರಿಕೆಯೊಂದನ್ನು ಅವನತ್ತ ಎಸೆದಳು.

ಚಂದ್ರಮೋಹನರಾಯ್. ಪತ್ರಿಕೆಯಲ್ಲಿ ದಪ್ಪಕ್ಷರಗಳಿಂದ ಮುದ್ರಿತವಾದ ವರದಿಯನ್ನು ಉಸಿರುಬಿಡದೆ ಓದಿದನು ಅದು ಹೀಗಿದ್ದಿತು.

" ಮಿಸ್‌ಮಾಲಾಳ ರಹಸ್ಯಮಯ ಕೊಲೆ '

" ಕೊಲೆಪಾತಕಿಯು ಪತ್ತೆಯಾಗಿಲ್ಲ. "

" ಪೋಲೀಸರು ಇನ್ನೂ ಯಾರನ್ನೂ ಬಂಧಿಸಿಲ್ಲ '

" ಪೋಲೀಸರು ಎಲ್ಲ ರೀತಿಯಿಂದಲೂ ತನಿಖೆಯನ್ನು ನಡಯಿಸಿದ್ದಾರೆ'

" ಚಂದ್ರಮೋಹನರಾಯ್ ಪತ್ರಿಕೆಯನ್ನು ಮುಚ್ಚಿ ಮೇಜಿನ ಮೇಲಿಟ್ಟು ಹೇಳಿದನು. "ಇದು ದಿನ ಪತ್ರಿಕೆಯು ವ ( ಇದು ಕೇವಲ ಸುದ್ದಿಯ ರೂಪದಲ್ಲಿ ಕೊಡಲ್ಪಟ್ಟಿದೆ ನಮ್ಮದು ವಾರಪತ್ರಿಕೆ ಕೇವಲ ಸಿನಿಮಾ ನಾಟಕಗಳಿಗಾಗಿ ಪ್ರತ್ಯೇಕ ಮೀಸಲಾಗಿದೆ. ಅಂದಮೇಲೆ ನಾವು ಈ ಘಟನೆಗೆ ಹೆಚ್ಚಿನ ಪ್ರಾಸಸ್ತ್ಯ ಕೊಡುತ್ತೇವೆ. !"

" ಇರಲಿ ಈಗ ನೀವು ಬಂದ ಉದ್ದೇಶವೇನು ?"

"ಕೊಲೆ ಹೇಗೆ ಮತ್ತು ಏಕೆ ಸಂಭವಿಸಿತು ಎಂದು ತಿಳಿದುಕೊಳ್ಳಲಿಕ್ಕೆ

'ನಾನು ಹೇಳಲಾರೆ ಮಿಸ್ಟರ್ ನಾನೀಗ ಪೋಲೀಶರ ಕೈದಿಯಾಗಿದ್ದೇನೆ'

" ಈಗ ಎಷ್ಟು ಜನರ ಬಂಧನವಾಗಿದೆ ?"

"ಇದೇ ಈಗ ಪತ್ರಿಕೆಯಲ್ಲಿ ಓದಿದ್ದೀರಲ್ಲ ?"

'ಅದು ನಿನ್ನೆ ರಾತ್ರಿಯ ವರೆಗಿನ ಸುದ್ದಿ ಮಾತ್ರ."

"ಈಗಲೂ ಅಷ್ಟೆ."

"ಆಗಲಿ ಬರುತ್ತೇನೆ.' ಎಂದವನೇ ಎದ್ದು ಹೊರಗೆ ಬಂದು ಬಿಟ್ಟ

"ಪೋಲೀಸ ಸ್ಟೇಶನಿಗೆ ಹೋದ. ಸಿಂಗರು ಇರಲಿಲ್ಲ ಅವರು ತನಿಖೆಗಾಗಿ ಹೊರಗೆ ಹೋಗಿದ್ದರೆಂದು ತಿಳಿಯಬಂದಿತು "ಆಗಲಿ" ಎಂದುಕೊಂಡು ಸೈಕಲ್ ಮೋಟರು ತಿರುಗಿಸಿಕೊಂಡು ಹೊರಟುಹೋದ.



## ( ೧೧ )

ಇನ್ಸಪೆಕ್ಟರು ಸಿಂಗರು ಹಿಂದಿನ ರಾತ್ರಿ ಬಹಳ ಹೊತ್ತಿನ ವರೆಗೆ ವಿಚಾರ ಮಾಡಿ ಮಾಡಿ ಕೊಲೆಯ ಒಂದು ಗೂಪರೇಖೆಯನ್ನು ತಯಾರಿಸಿದ್ದರೂ ಹಾಗೂ ಅದನ್ನು ಪತ್ತೆಹಚ್ಚುವದಕ್ಕಾಗಿ ಕಾರ್ಯಕ್ರಮುವನ್ನು ಹಾಕಿಕೊಂಡಿದ್ದರೂ ಕಾರಣ ಬೆಳಗಿನಲ್ಲಿ ಏಳುಗಂಟೆಗೆ ಬೆಳಗಿನ ನ್ಯಾರಿಯನ್ನು ತೀರಿಸಿಕೊಂಡವರೇ ಜೀಪಿನಲ್ಲಿ ಕುಳಿತು ಶಿವಾಜಿ ಪಾರ್ಕಿಗೆ ನಡೆದರು. ಒಂದು ಸಣ್ಣಮನೆಯ ಮುಂದೆ ನಿಂತು ತಮ್ಮ ಬೆತ್ತದಿಂದ ಬಾಗಿಲವನ್ನು ಬಡಿದರು. ಒಬ್ಬ ಚಿಕ್ಕಹುಡುಗನು ಬಂದು ಬಾಗಿಲ ತೆರೆದನು. "ಎಲ್ಲಿದ್ದಾರೆ ದೊಡ್ಡವರು?" ಎಂದು ಕೇಳಿದರೂ ಮರುಕ್ಷಣದಲ್ಲಿ ಮಧ್ಯವಯಸ್ಸಿನ, ಬುರುಖೆ ಹಾಕಿಕೊಂಡ ಹೆಂಗಸೊಬ್ಬಳು ಓಗೊಟ್ಟಳು. "ಗಫಾರ ಎಲ್ಲಿದ್ದಾನೆ ?" ಎಂದು ಕೇಳಿದರು.

'ಕೆಲಸಕ್ಕೆ ಹೋಗಿದ್ದಾರೆ.'

'ಯಾವ ಕೆಲಸ.'

'ಗಿರಣಿ ಕೆಲಸಕ್ಕೆ.'

'ಯಾವಾಗ್ಗೆ ಬರುತ್ತಾರೆ. ?'

'ಎರಡು ಘಂಟೆಗೆ.'

ಇನ್ಸಪೆಕ್ಟರರು ಗರಕ್ಕನೆ ಹೊರಳಿ ನಡೆದರು. ಮರನೆಕ್ಷಣದಲ್ಲಿ ತಿರುಗಿ ಓಡಿಬಂದುಬಿಟ್ಟರು ಮನೆಯ ಕಿಟಕಿಯು ಒಂದೇ ಕ್ಷಣದಲ್ಲಿ ತೆರೆದ ಪುನಃ ದೊಪ್ಪನೆ ಮುಚ್ಚಿಕೊಂಡ ಸಪ್ಪಳ ಕೇಳಿಸಿತು. ಆದ್ದರಿಂದ ಗಫಾರ ಎಲ್ಲಿಯೂ ಕೆಲಸಕ್ಕೆ ಹೋಗಿಲ್ಲ ಇಲ್ಲಿಯೇ ಅಡಿಗಿಕೊಂಡಿದ್ದಾನೆ ಎಂದು ಅನಿಸಿತು ಪುನಃ ಬಾಗಿಲನ್ನು ಬಲವಾಗಿ ತಟ್ಟಿದರು. ಅದೇ ಬುರುಖೆ ಬಂದು ಬಾಗಿಲಗೆ ಅಡ್ಡನಿಂತಿತು· "ಗಫಾರನನ್ನು ಹೊರಗೆ ಕರೆಯಿರಿ." ಎಂದು ಗದ್ದರಿಸಿದರು ಸಿಂಗ್.

'ಅವರು ಕೆಲಸಕ್ಕೆ ಹೋಗಿದ್ದಾರೆಂದು ಹೇಳಲಿಲ್ಲವೇ ?'

'ನೀವು ಹೇಳಿದ್ದು ಸರಿ ಆವನು ಮನೆಯಲ್ಲಿಯೇ ಇದ್ದದು ಅದಕ್ಕಿಂತಲೂ ಸರಿ'

'ನೀವು ಗಂಡಸರಿಲ್ಲದ ವೇಳೆಯಲ್ಲಿ ಬಂದು ಹೆಂಗಸರಿಗೆ ತೊಂದರೆ ಕೊಡಲು ನಾಚಿಕೆಯಾಗುವದಿಲ್ಲವೇ'

'ಯಾತರ ನಾಚಿಕೆ ಗಂಡನನ್ನು ಬಚ್ಚಿಟ್ಟು ಸುಳ್ಳು ಹೇಳುವದು ನಾಚಿಕೆಯಾಗಬೇಕು ಈ ಕಿಟಕಿಯನ್ನು ಯಾರು ಒಮ್ಮೆಲೆ ತೆಗೆದು ಮುಚ್ಚಿದರು ಎಂಬು ನಿರ್ದಯ ಕಂಠದಿಂದ ಕೇಳಿದರು ಇನ್ಸಪೆಕ್ಟರರು.'

ಗಫಾರನು ಪಂಜರದಿಂದ ಸಿಂಹ ಹೊರೆಗೆ ಬರುವಂತೆ ಬಾಗಿಲಿಗೆ ಬಂದು ಹೆಂಗಸಿಗೆ ನೀನು ಒಳಗೆ ಹೋಗು ಎಂದು ಕಳಿಸಿಕೊಟ್ಟು ಕ್ಷಮಿಸಿರಿ ರಾವಸಾಬ ಎಂದು ಕೈ ಮುಗಿದನು.

ಆಹ್. ನೀನಿನ್ನು ಉಳಿಯಲಾರೆ ಈ ರೀತಿಯಿಂದ ವರ್ತಿಸಹತ್ತಿದರೆ ತಿಳಿಯಿತೆ, ಬೆಳಗಿನಲ್ಲಿ ನಾನೇಕೆ ನಿನ್ನ ಮನೆಯಿವರೆಗೆ ಬರಬೇಕಾಯಿತು ಹೇಳು ನೋಡೋಣ.

ನನಗೆ ಗೊತ್ತಿಲ್ಲ ರಾವಸಾಬ ನಾನು ಅಮ್ಮದಾಬಾದಿನಿಂದ ನಿನ್ನೆ ರಾತ್ರಿ ಬಂದೆ ನನಗೆ ಯಾವಸುದ್ದಿಯೂ ಗೊತ್ತಿಲ್ಲ

ಮರೀನ ಡ್ರೈವ್ನದಲ್ಲಿ ಕೊಲೆಯಾಗಿದೆ ಗೊತ್ತೆ ?

ಯಾರದು ರಾವಸಾಬ.

‘ ಮಿಸ್ ಮಾಲಾಳದು ’

‘ ಅಯ್ಯೋ ಯಾರು ಮಾಡಿದರು ರಾವಸಾಬ ? ’

‘ ನನಗೇ ಕೇಳುತ್ತಿಯೇನು ಹಾಗಾದರೆ ಕೇಳು. ನೀನೇ ಮಾಡಿದ್ದೀ ’

“ ತೋಬಾ ತೋಬಾ. ಇದೆಂಥ ಪಾಪ ರಾವಸಾಬ ನಾನು ಏನೂ ಮಾಡಿದರೂ ತಮ್ಮ ಮುಂದೆ ಒಪ್ಪಿಕೊಂಡಿಲ್ಲವೇ ಇಲ್ಲಿಯವರೆಗೆ ”

“ ಇಲ್ಲ ನೀನು ನಿನ್ನೆ ಅವಳ ಮನೆಗೆ ಮಧ್ಯಾನ್ಹ ಹನ್ನೆರಡು ಘಂಟೆಗೆ ಹೋಗಿ ಕೊಲೆ ಮಾಡಿದ್ದೀ ಅಲ್ಲಿ ನಿನಗೆ ಏನೂ ಸಿಕ್ಕಿಲ್ಲ ಓಡಿ ಬಂದು ಮನೆಯಲ್ಲಿ ತಲೆತಪ್ಪಿಸಿ ಮಲಗಿ ಬಿಟ್ಟಿದ್ದೀ ”

“ ಎಂಥ ಅಪವಾದ ರಾವಸಾಬ ನಾನು ಅಮ್ಮದಾಬಾದಿನಲ್ಲಿದ್ದವನು ಗಾಡಿಯಲ್ಲಿದ್ದೆ ನಿನ್ನೆ ಮಧ್ಯಾನ್ಹ ಹನ್ನೆರಡು ಘಂಟೆಗೆ. ”

“ ಇಲ್ಲ ನೀನು ಮನೆಯ ಒಳಗೆ ಹೋಗುವದನ್ನು ನಂತರ ಇಪ್ಪತ್ತು ಮಿನಿಟುಗಳಾದಮೇಲೆ ನೀನು ಓಡಿ ಹೋಗಿ ಕಂಪೌಂಡ ಕದಕ್ಕೆ ಹಾಯ್ದು ಹೊರಗೆ ಜಾರಿಕೊಂಡದ್ದನ್ನೂ ಕಂಡಾರೆ ಕಂಡವರು ಹೇಳಿದ್ದಾರೆ ತಿಳಿಯಿತೆ ”

“ ಹಾಗಾದರೆ ಈಗಲೇ ಬೇಡಿ ಹಾಕಿಕೊಂಡು ನಡೆಯಿರಿ. ನಿಮಗೆ ಈಗ ಹೇಳಿದ ಸುದ್ದಿಕೊಟ್ಟವರನ್ನು ಹಿಡಿದು ತರಿಸಿ ನನ್ನ ಗುರ್ತು ಹೇಳಲಿ. ರಾವಸಾಬ. ”

–“ ಸಾಕುಸಾಕು. ನಿನ್ನ ಆ ದೋಸ್ತ ಜಗ್ಗು ಎಲ್ಲಿ ಭೂಗತವಾಗಿದ್ದಾನೆ?

–‘ ನನಗೇನೂ ಗೊತ್ತಿಲ್ಲ ರಾವಸಾಬ. ಒಂದು ತಿಂಗಳು ಆಯಿತು ನಾನು ಅಮ್ಮದಾಬಾದಕ್ಕೆ ಹೋಗಿದ್ದೆ. ”

“ ಈಗ ಮತ್ತೆಲ್ಲಿ ಹೋಗುತ್ತೀ ?”

“ ಎಲ್ಲಯು ಇಲ್ಲ ರಾವಸಾಬ. ”

## ೧೨ )

ಇನ್ಸಪೆಕ್ಟರರು ಜೀಪು ತಿರುಗಿಸಿದವರೇ ಭೇಂಡೀಬಜಾರಕ್ಕೆ ಸಾಗಿಸಿದರು ಅಲ್ಲಿ ಒಂದು ಮೋಡಕಾ ಅಂಗಡಿಹತ್ತಿರ ನಾಲ್ಕೈದು ಜನರು ಇಸ್ಪೀಟು ಆಡುತ್ತಿದ್ದರು. ಜೀಪ ಬಂದುಕೂಡಲೇ ಅವರೆಲ್ಲರೂ ಓಡಹತ್ತಿದರು

" ಜಗ್ಗೂ, ಬಾ ಇಲ್ಲಿ " ಎಂದು ಸಿಂಗರು ಕೂಗಿದರು.

ಒಬ್ಬ ವಿಕಾರ ರೂಪದ ಮನುಷ್ಯ ಜೀಪಿನ ಎದುರಿಗೆ ಬಂದು ನಿಂತನು ಒಳಗೆ ಬಾ ಎಂದರು ಅವನು ಒಮ್ಮೆಲೆ ಹೆದರಿದನು ಹಾಗೂ ನಿಂತಲ್ಲಿಯೇ ನಿಂತು ಬಿಟ್ಟನು.

" ಏಕೋ ಹೇಳಿದ್ದು ಕೇಳಿಸಲಿಲ್ಲವೇ ? " ಎಂದು ಗದ್ದರಿಸಿದರು. ಸಿಂಗ ಆ ವ್ಯಕ್ತಿ ಸುಮ್ಮನೆ ಬಂದು ಬಿಲವನ್ನು ಹೊಕ್ಕಿತು. ಸಿಂಗ ಸಮೀಪಿಸಿದ ಪೋಲೀಸ ಚೌಕಿಗೊಯ್ದು ಅಲ್ಲಿ ಕುಳಿತು ವಿಚಾರ ನಡೆಸಿದರು.

" ಜಗ್ಗೂ ಮತ್ತೇನು ಸಮಾಚಾರ ನಿನ್ನೆ ಮದ್ಯಾಹ್ನ ಎಷ್ಟು ಚಾನ್ಸ ಆಯಿತು. ? "

" ಎಲ್ಲೀ ಚಾನ್ಸು ರಾವಸಾಬ ಈ ಅಂಧರ-ಬಾಹರ ಆಟದಲ್ಲಿ ಏನು ಚಾನ್ಸ ಆದೀತು.

' ಏ ಬೇವಕೂಫ ನಾನೇನು ಕೇಳುತ್ತಿದ್ದೆ ನೀನೇನು ಹೇಳುತ್ತಿದ್ದಿ '

ಜಗ್ಗೂ ದಿಕ್‌ಮೂಢನಾಗಿ ನಿಂತು ಬಿಟ್ಟನು.

" ಮರೀನಾ ಡ್ರೈವ ಕಡೆ ನಿನ್ನೆ ಎಷ್ಟೊತ್ತಿಗೆ ಹೋಗಿದ್ದೆ ? "

' ನಿನ್ನೆ ಆ ಕಡೆ ಹೋಗಿಲ್ಲ ರಾವಸಾಬ ನಾನು ಇಲ್ಲಿಯೇ ಕುಳಿತಿದ್ದೆ ನನ್ನ ಕಾಲು ನಡೆಯಲಿಕ್ಕೆ ಬರುವದಿಲ್ಲ ಇಲ್ಲಿ ನೋಡಿರಿ " ಎಂದು ಮೊಳಕಾಲಿಗೆ ಗಾಯವಾದದ್ದನ್ನು ಮಾಸಿದ ಪೈಜಾಮು ಸರಿಸಿ ತೋರಿಸಿದನು.

'ನನಗೆ ಗೊತ್ತಿದೆ ಬಿಡು. ನಿನ್ನೆ ಕಂಪೌಂಡು ಗೋಡೆ ಜಿಗಿದಿಹೌದಲ್ಲವೆ'

' ಯಾರ ಮನೆಯ ಕಂಪೌಂಡು ರಾವಸಾಬ '

" ಮಿಸ್ ಮಾಲಾಳ ಮನೆಯದು ಮತ್ತಾರದು. "

" ನಾನೇಕೆ ಆವಳ ಮನೆಯ ಕಂಪೌಂಡು ಜಿಗಿಯಲಿ ? "

' ಮತ್ತೆ ಕೊಲೆ ಮಾಡಿ ಯಾರಕೈಗೂ ಸಿಗಬಾರದೆಂದೂ ತಿಳಿದು ಕಂಪೌಂಡಿನೊಳಗಿಂದಲೇ ಓಡಿ ಬಂದು ಕುಂಬಿ ಜಿಗಿದು ಟ್ಯಾಕ್ಸಿ ಹತ್ತಿದ್ದು ಸುಳ್ಳೇನು ಆ ಗಾಯ ಬಹಳ ದೊಡ್ಡದೇನಲ್ಲಿ ಒಂದು ಕಾಲಿಗೆ ಹತ್ತಿದೆ ಇಷ್ಟೆ

'ರಾವಸಾಬ ನಿಮ್ನೆ ನಾನು ಮರೇನಾ ಡ್ರೈವ್ಹ ಕಡಿಗೆ ಹಾಯ್ದೇಯಿಲ್ಲ ಅಲ್ಲಾನ ಆಣೆಮಾಡಿ ಹೇಳುತ್ತೇನೆ. ನಾನು ಎಂದಾದರೂ ತಮ್ಮ ಎದುರಿಗೆ ಸುಳ್ಳು ಹೇಳಿದ್ದೇನೆಯೇ ಬಡವನಿಗೆ ಹಗಲೆಲ್ಲ ಯಾಕೆ ತ್ರಾಸುಕೊಡುತ್ತೀರಿ'

' ತ್ರಾಸವೆ, ಬಡವನಂತೆ ಅಂದರೆ ನೀನು ಖೂನಿ ಮಾಡಿದರೂ ಕೂಡಾ ಹೋಗಲಿ ಬಿಡು ಪಾಪ ಬಡವ ಸುಖವಾಗಲಿ ಅನ್ನಬೇಕೆ. '

' ರಾವಸಾಬ. ಖೂನಿ ಮಾಡಿದರೆ ಎಲ್ಲಿಗೆ ಹಾಕಬೇಕು ಕಳವು ಮಾಡಿ ದರೆ ಜೇಲಿಗೆ ಹಾಕಬೇಕು ಈ ಜಗ್ಗೂ ಪೋಲೀಸರಿಗೆ, ಮ್ಯಾಜಿಸ್ಟ್ರೇಟರಿಗೆ ಸುಳ್ಳುಹೇಳಿ ಉಪಜೀವನವನ್ನು ಸಾಗಿಸುವದಿಲ್ಲ. '

' ಆದೆಲ್ಲ ರಗಳೆ ಬೇಡ ಕಾಯ್ದೆಯನ್ನು ಸರಕಾರಕ್ಕೆ ನೀನು ಕಲಿಸಬೇಡ ಇಲ್ಲದಿದ್ದರೆ ಇಷ್ಟೊತ್ತಿಗೆ ನೀನೇ ಬ್ಯಾರಿಷ್ಟರ ಆಗುತ್ತಿದ್ದೀ ಈಗ ಕೇಳು ನೀನು ಮಯೂರ ಪಂಖಿಳೆ ಕೈಯಲ್ಲಿನ್ನ ಗಡಿಯಾರವನ್ನು ಕಿತ್ತುಕೊಳ್ಳಲು ಹೋದಾಗ ಅದರ ಕಾಜು ಒಡೆಯಲಿಲ್ಲವೆ ? '

' ಇದು ಶುದ್ಧ ಸುಳ್ಳು ರಾವಸಾಬ '

' ಸುಳ್ಳೇಕೆ ಹೇಳುತ್ತಿದ್ದೀ ನಿನ್ನ ಬೆರಳು ಅಲ್ಲಿ ಮೂಡಿವೆ ಈಗಲೇ ನಿನ್ನನ್ನು ರಸ್ತಗಿರಿ ಮಾಡುತ್ತೇನೆ. ತಿಳಿಯಿತೇ ?'

' ರಸ್ತಗಿರಿ ಮಾಡಲಿಕ್ಕೆ ಯಾರು ಬೇಡ ಅಂದವರು ರಾವಸಾಬ, ಇನ್ನೊಮ್ಮೆ ಚೌಕಶಿ ಮಾಡಿಸಿಕೊಳ್ಳಿರಿ. ನಾನೆಲ್ಲಿಯೂ ತಲೆ ಮರೆಸಿಕೊಂಡು ಓಡುವದಿಲ್ಲ.

' ಓಡಿ ಹೋದರು, ನಾನು ಬಿಡುವನಿಲ್ಲ ತಿಳಿಯಿತೇ. ಆ ಗಫಾರ ಏನು ಮಾಡುತ್ತಾನೆ ಈಗ ?

" ಯಾವ ಗಫಾರ ರಾವಸಾಬ '

' ಅವನೇ ಇಬ್ಬರು ಕೂಡಿ ಒಮ್ಮೆ ಒಬ್ಬ ಸೇಠಜಿಯ ಚಾಳಿಸ ಡಬ್ಬಿ

ಹಾರಿಸಿದ್ದನಲ್ಲ ಹಣದ ಪರ್ಸ ಅಂತಾ ತಿಳಿದು. '

" ಓಹೋ ಆತನೇ ಅವನೊಲಿಯೆ ಗಿರಣಿ ಕೆಲಸ ಹಿಡಿದಿದ್ದಾನೆ. ನಾನು ಈ ಎರಡು ಮೂರು ತಿಂಗಳಾಯಿತು ರಾವಸಾಬ ಅವನು ಸಿಕ್ಕಯೇಇಲ್ಲ

' ಏಕೆ ನಿಮ್ಮ ದೋಸ್ತಿ ಕಾಂಟ್ರಾಕ್ಟ ಮುಗಿಯಿತೇನೋ ?'

' ನೀವೇ ಮುಗಿಸಿಬಿಟ್ಟಿರಲ್ಲ ರಾವಸಾಬ. ' ಎಂದು ಹಲ್ಲು ಕಿರಿದ ಇನ್ಸಪೆಕ್ಟರ ಸಿಂಗರಿಗೆ ಅಸಾಧ್ಯ ಕೇಸು ಬಂದಿತು. 'ಸಾಕು ಸುಮ್ಮನಾಗು' ಎಂದು ಮುಷ್ಟಿಯನ್ನು ಬಿಗಿದರು. ಪೋಲೀಸನಿಗೆ ಜಗ್ಗೂನನ್ನು ಸ್ಟೇಶನಿಗೆ ತಂದು ಬಿಡಲು ಹೇಳಿ ಜೀಪ ತೆಗೆದುಕೊಂಡು ನಡೆದುಬಿಟ್ಟರು.

## ( ೧೩ )

ಸಿಂಗರು ಅಲ್ಲಲ್ಲಿ ಸುತ್ತಸಿಕೊಂಡು ಹನ್ನೊಂದು ಘಂಟೆಗೆ ಕಚೇರಿಗೆ ಬಂದರು. ಅವರು ಹೊರಗೆ ಹೋದ ಉದ್ದೇಶ ಫಲವಿಸಲಿಲ್ಲ. ಅವರ ದೃಷ್ಟಿಯಲ್ಲಿ ಯಾರೂ ತಪ್ಪಿತಸ್ಥರಾಗಿ ಕಾಣಲಿಲ್ಲ. ಹಾಗೆಯೇ ಕಾಗದ ಪತ್ರ ನೋಡುತ್ತ ಪುಟ ಹಾಕುತ್ತ ಕುಳಿತರು. ಅಷ್ಟರಲ್ಲಿ ಚಂದ್ರಮೋಹನರಾಯ್ ಹಾಜರಾದರು.

" ಮಿಸ್ಟರ ರಾಯ್. ಈಗ ನಾನೇನೂ ನಿಮಗೆ ಹೇಳಲಾರೆ. ಯಾವ ಪತ್ರಿಕೆಯವರೂ ಈ ವಿಷಯಕ್ಕೆ ನಿಮ್ಮಷ್ಟು ಆಸ್ಥೆವಹಿಸಿಲ್ಲ. ನೀವೇಕೆ ನನಗೆ ಬಂದು ಹಗಲೆಲ್ಲ ಪೀಡುಸುತ್ತಿದ್ದೀರಿ ?"

" ಸಾಹೇಬರೇ ಪತ್ರಿಕಾವರದಿಗಾರರೆಂದರೆ ಬೇಟೆನಾಯಿಗಳಿದ್ದಂತೆ. ಸುದ್ದಿಯ ವಾಸನೆ ಬಂದಿತೆಂದರೆ ಏನು ಮಾಡಿದರೂ ಅವರು ಬಿಡುವದಿಲ್ಲ. ನಾನು ಸಿನೆ ಪತ್ರಿಕೆಯ ವರದಿಗಾರ. ನಾನು ಇಂತಹ ಸುದ್ದಿ ವರದಿಮಾಡದಿದ್ದರೆ ಬಾಸ ನನಗೆ ಸಂಬಳ ಕೊಟ್ಟಾರೆಯೇ ?"

" ಆದಿರಲಿ ಮಿಸ್ಟರ ರಾಯ್. ನನಗಿನ್ನೂ ಈ ಕೊಲೆಯ ಸುಳಿವು ಹತ್ತಿಲ್ಲ. ನಿಮಗೆ ಚಿತ್ರಮಯ ಜಗತ್ತಿನ ಪರಿಚಯ ಸಾಕಷ್ಟಿದೆ. ಮಿಸ್‌ಮಾಲಾಳ ಬಗ್ಗೆ ನಿಮ್ಮಲ್ಲಿ ಏನಾದರೂ ಹಾರಿನೆಸುದ್ದಿ ಅವೆಏನು. "

' ಏನೂ ಇಲ್ಲ '. ಎಂಭ ಅರ್ಥದಲ್ಲಿ ಗೋಣು ಹಾಕಿದನು.

" ಏನಾದರೂ ಮಾಡಿ ವೇಳೆಗಳೆಯದೆ ಪತ್ತೆ ಮಾಡಲೇಬೇಕು ಮಿಸ್ಟರ ರಾಯ್ ಇಲ್ಲವಾದರೆ ಒಮ್ಮೆ ಪರಾರಿಯಾದ ವ್ಯಕ್ತಿ ಈ ಜನಸಮುದ್ರದಲ್ಲಿ ಸಿಗುವದು ಕಷ್ಟ. "

" ಆದು ನಿಜ. ಈಗ ನೀವು ಯಾರನ್ನಾದರೂ ಬಂದಿಸಿದ್ದೀರೇನು. "

" ನಾನು ಕಚೇರಿಯ ಗೌಪ್ಯ ಬಹಿರಂಗಪಡಿಸಲಾರೆ. "

" ಇಲ್ಲ. ನಾನು ಆಸ್ಥೆಯಿಂದ ನನಗೆ ಗೊತ್ತಿದ್ದಷ್ಟು ರೀತಿಯಲ್ಲಿ ಸಾಧ್ಯವಾದಷ್ಟು ರೀತಿಯಿಂದ ಮಾಡಿಸಿ ತೆಗೆಯುತ್ತೇನೆ '

" ನೀವು ನಿಮಗೆ ಸಿಕ್ಕ ಮಾಹಿತಿ ಪೂರ್ಣ ಹೇಳಿರಿ. "

"ನನಗೇನೂ ಇನ್ನೂ ಸಾಧ್ಯವಾಗಿಲ್ಲ ಮುಂಬಯಿಯಲ್ಲಿ ಎಗ್ಝಿಕ್ಯೂಟಿವ್ಹ ಕೆಲಸವೆಂದರೆ ಬಹಳ ಕಷ್ಟದಾಯಕವಾಗಿದೆ. ಒಂದು ಸುದ್ದಿಸಿಗಬೇಕಾದರೆ ಕುರಿಕೋಣ ಬೀಳಬೇಕಾಗುತ್ತದೆ, "

" ಎಲ್ಲ ಕಡೆಗೂ ಹಾಗೆಯೇ. ನೀವೇನೂ ನನಗೆ ಸಹಾಯ ನೀಡು ಪದಿಲ್ಲ ವೆಂದು ಕಾಣುತ್ತದೆ ಇರಲಿ ಒಂದು ಕೆಲಸ ಮಾಡಿರಿ ರಿಜಕ್ಕೆ ಹೋಗಿ ಅಲ್ಲಿ ಪ್ರೇಗ್ರಾಮು ಮ್ಯಾನೇಜರರನ್ನು ಭೆಟ್ಟಿಯಾಗಿ ಸಾಧ್ಯವಿದ್ದ ಹಾಗೂ ಸಂಬಂಧವಿದ್ದ ಮಾಹಿತಿ ತಕ್ಕೊಂಡು ಐದು ಘಂಟೆಗೆ ನನ್ನನ್ನು ಇಲ್ಲಿಯೇ ಬೆಟ್ಟಿಯಾಗಿರಿ. "

" ಆಗಲಿ ನಾನು ಬರುತ್ತೇನೆ." ಎಂದು ಉಲ್ಲಸಿತವಾಗಿ ಚಂದ್ರಮೋಹನ ರಾಯ ಸಿಳ್ಳುಹಾಕುತ್ತ ಹೊರಟು ಹೋದನು.

ಆಗಲೆ ಹನ್ನೆರಡು ಆಗುತ್ತ ಬಂದಿದ್ದರಿಂದ ಸಿಂಗ್ ಊಟಕ್ಕೆಂದು, ಮನೆಯ ಕಡೆಗೆ ಸಾಗಿದರು.



ಮೂರು ಘಂಟೆಯ ಸುಮಾರಿಗೆ ಮತ್ತೊಮ್ಮೆ ಶ್ರೀನಿವಾಸಕ್ಕೆ ಭೆಟ್ಟಿ ಕೊಟ್ಟರು. ಮಿಸ್‌ಸೋಫಿಯಾ ಸ್ಟೌಮಲಗಿಕೊಂಡಿದ್ದಳು ಸಿಂಗ ಬಂದೊಡನೆ ಎದ್ದು ಹೊಗಿ ಮುಖತೊಳೆದುಕೊಂಡು ಬ್ರಶ್‌ನಿಂದ ಕೂದಲು ಸರಿಪಡಿಸಿ ಕೊಂಡು ಬಂದು ಕುಳಿತಳು ಇನ್ಸಪೆಕ್ಟರರು ಸಿಗರೇಟು ತೆಗೆದು ಬೆಂಕಿ ಹಚ್ಚುತ್ತ "ಮಿಸ್‌ಸೋಫಿಯಾ ನೀವೇ ನಿಮ್ಮ ಅಕ್ಕನನ್ನು ಯಾಕೆ ಕೊಲೆ ಮಾಡಿರಬಾರದು?" ಎಂದರು. ಸೋಫಿಯಾ ಒಮ್ಮೆಲೆ ಚೀರಿಕೊಂಡಳು. ಮರುಕ್ಷಣದಲ್ಲಿಯೇ ಸುಧಾರಿಸಿಕೊಂಡು ಆ ಸುದ್ದಿ ಎತ್ತಿದ ಕೂಡಲೆ ಭಯ ವಾಗುತ್ತದೆ ಇನ್ಸಪೆಕ್ಟರಸಾಬ. ದಯಮಾಡಿ ಬೇರೆ ವಿಷಯ ಮಾತ ನಾಡಲಾರಿರಾ ?"

"ಮಿಸ್‌ಸೋಫಿಯಾ ನನ್ನ ಕೆಲಸ ಅದಲ್ಲಿ. ನನಗೆ ಮೊದಲು ಉತ್ತರ ಕೊಡಿರಿ."

"ನಾನು ನನ್ನ ಅಕ್ಕನನ್ನು ಕೊಲೆಮಾಡಿಲ್ಲ"

"ಆದರೆ ಇಲ್ಲಿಯ ವರೆಗೆ ನಡೆಸಿದ ಎಲ್ಲ ತನಿಖೆಯಿಂದ ನಿಮ್ಮ ಮೇಲೆ ಗುಮಾನಿ ಹೆಚ್ಚಾಗಿ ಬಂದಿದೆ"

"ಅದಕ್ಕೇನೂ ಅರ್ಥವಿಲ್ಲ ಇನ್ಸಪೆಕ್ಟರಸಾಬ. ಕೊಲೆ ಮಾಡಲು ನನ್ನಕ್ಕನ ಮೇಲೆ ಅಸೂಯೆಯೇ ?"

"ಹಾ! ನಿಜವನ್ನೇ ಹೇಳುತ್ತಿದ್ದೀರಿ ಕೇವಲ ಉತ್ಸರದಿಂದಲೇ ನೀವು ಅವಳನ್ನು ಕೊಲೆ ಮಾಡಿದ್ದೀರಿ. ನೀವು ಹೇಗೆ ಕೊಲೆ ಮಾಡಿದ್ದೀರೆಂಬುದು ನಾನು ನಿಮಗೆ ಪೂರ್ಣವಾಗಿ ಹೇಳುತ್ತೇನೆ ಕೇಳಿರಿ ಅದರಲ್ಲಿ ಏನಾದರೂ ಆಕ್ಷೇಪವಿದ್ದರೆ ನನಗೆ ತಿಳಿಸಿಕೊಡಿರಿ ನಾನು ಸರಿತೋರಿದರೆ ಒಪ್ಪಿಕೊಳ್ಳುತ್ತೇನೆ. ಇದು ನೋಡಿರಿ ಮೊದಲನೆಯ ಕಾರಣವೆಂದರೆ ನೀವು ಕೇವಲ ಒಬ್ಬ ಕೋರಸ್ ಗರ್ಲ ಆಗಿದ್ದಿರಿ ನಿಮ್ಮ ಅಕ್ಕ ಸುಪ್ರಸಿದ್ಧ ಕ್ಲಬ್ ಡಾನ್ಸರ್ ಆಗಿದ್ದಳು. ಅವಳಿಗೆ ಮೇಲಿಂದ ಮೇಲೆ ಆಮಂತ್ರಣಗಳು, ಪಾರಿತೋಷ ಕಗಳು, ಪಾರ್ಟಿಗಳು, ಕಾಂಟ್ರಾಕ್ಟುಗಳು ಬರುತ್ತಿದ್ದವು ಅವೆಲ್ಲ ನಿಮಗೆ ಬರುತ್ತಿದ್ದಿಲ್ಲ ಆದರೂ ನೀವು ಮಾತ್ರ ಆ ಸುಪ್ರಸಿದ್ಧ ಹುಡಿಗೆಯ ನೆರಳಿನಲ್ಲಿ ಅವಳ ತಂಗಿಯೆಂದು ಓಡಾಡುತ್ತಿದ್ದಿರಿ. ಕಳೆದ ವಾರದಲ್ಲಿ ಹೊಸದಾಗಿ ಎರಡು ಕಾಂಟ್ರಾಕ್ಟುಗಳು ಅವರಿಗೆ ದೊರೆತವು, ಹಾಗು ಒಂದು ಸ್ಟುಡಿಯೋ ದಲ್ಲಿಯಂತೂ ಕಾಂಟ್ರಾಕ್ಟ ಸಹಿಯಾದ ಮೂರನೇ ದಿನವೇ ಶೂಟಿಂಗ

‘ ಇದೇ ಅಟ್ಟದ ಮೇಲೆ ಹೋಗೋಣ ನಡೆಯಿರಿ. ’ ಎಂದು ಸಿಂಗರನ್ನು ಮೇಲೆ ಕರೆದುಕೊಂಡು ಹೋಗಿ ಕುಳ್ಳಿರಿಸಿ ಪುನಃ ಕೆಳಗೆ ಬಂದು ಚಹ ತರಿಸಿಕೊಡಲು ಕಾರಕೂನನಿಗೆ ಹೇಳಿ ಮೇಲೆ ಹೋದನು.

ಸಿಂಗ ಇವನು ಬಂದದ್ದನ್ನು ನೋಡಿದವರೇ ನೆರವಾಗಿ ವಿಷಯ ಪ್ರಸ್ತಾಪನೆ ಮಾಡಿದರು. “ಮಿಸ್ ಮಾಲಾಳ ಕೊಲೆಯಾಗಿದೆಯಲ್ಲ. ”

‘ ಅಹುದಂತೆ ಈ ದಿನ ಬೆಳಗಿನ ಪತ್ರಿಕೆಯಲ್ಲಿ ಓದಿ ಕೆಟ್ಟೆನಿಸಿತು. ’

“ ಏಕೆ ?”

“ ಅವಳೊಬ್ಬ ಸುರಸುಂದರಿ. ನಾಟ್ಯದಲ್ಲಿಯಂತೂ ಅವಳಿಗೆ ಸಮವಾದವರೂ ಯಾರೂ ಇಲ್ಲವೆಂದು. ”

‘ ಇಷ್ಟಕ್ಕೆ ಅಷ್ಟೊಂದು ಮನಸ್ಸಿಗೆ ದುಃಖ ಮಾಡಿಕೊಳ್ಳುವದುಂಟೆ ?’

“ ಇನ್ಸಪೆಕ್ಟರಸಾಬ ನಾನು ಚಲಚಿತ್ರ ಉದ್ಯಮದಲ್ಲಿಯೇ ಇದ್ದೇನೆ ಕ್ಲಬ್ಬಿನ ಜೀವನವೂ ನನಗೆ ಹೊಸದಲ್ಲ. ಎಲ್ಲರೂ ನಮ್ಮವರೇ ಎಂಬ ಭಾವನೆ ನನ್ನಲ್ಲಿ ಉಂಟಾಗಿದೆ. ”

‘ ಅದು ಹಲವು ಕಾರಣಗಳಲ್ಲಿ ಎಂದು ಕಾರಣವಾಗಿರಲಿಕ್ಕೆ ಸಾಕು”

‘ ಅಂದರೆ ?, ಎಂದು ಪ್ರಶ್ನಾರ್ಥಕ ದೃಷ್ಟಿಯಿಂದ ಸಿಂಗರ ಕಡೆಗೆ ನೋಡಿದರು. ”

ಅಷ್ಟರಲ್ಲಿ ಚಹ ಬಂದಿತು. ಇಬ್ಬರೂ ಚಹಕುಡಿದರು. ಬಾಯ್ ಕಪ್ಪು ತೆಗೆದುಕೊಂಡು ಹೋದನಂತರ ಇಬ್ಬರೂ ಸಿಗರೇಟ ಹೊತ್ತಿಸಿಕೊಂಡರು. ಸಿಂಗರು ಪುನಃ ತಮ್ಮ ವಿಷಯಕ್ಕೆ ಹೊರಳಿದರು. ‘ನೀವು ರಿಜ್‌ನಲ್ಲಿ ಯಾವಾಗಲೂ ಹೋಗುತ್ತಿರುವಿರಲ್ಲವೇ ?’

“ ಅಹುದು. ”

‘ ಒಬ್ಬರೇ ಹೋಗುತ್ತಿರೋ ಯಾರನ್ನಾದರೂ ಗೆಳೆಯರನ್ನು ಕೂಡಿಕೊಂಡು ಹೋಗುತ್ತಿರೋ ?’

ನಾನು ಒಬ್ಬನೇ ಹೋಗುತ್ತೀರುತ್ತೆನೆ, ಕ್ಲಬ್ಬಿನಲ್ಲಿಯೇ ಎಲ್ಲರೂ ಕೂಡುತ್ತಾರೆ.

‘ ನಿಮಗೆ ಕಳೆದವಾರದಲ್ಲಿ ಯಾರನ್ನಾದರೂ ಮಿಸ್ ಮಾಲಾಳಿಗೆ ಪರಿಚಯ ಮಾಡಿಕೊಟ್ಟರೇನು ?’

‘ ನನ್ನ ಗೆಳೆಯ ಚಮನಲಾಲನಿಗೆ ಮಾತ್ರ ಮೊನ್ನೆ ಗುರುವಾರ

ದಿವಸ ಕ್ಲಬ್ಬಿನಲ್ಲಿಯೇ ಆವಳ ಪರಿಚಯ ಮಾಡಿಕೊಟ್ಟೆನು. ”

“ ಮತ್ತೆ ಯಾರು ? ಅವರೇ ಒಬ್ಬರೇನು ?”

‘ ಆ ಹುದು ’

‘ ಅವರ ವಿಚಾರವಾಗಿ ಹೇಳುತ್ತೀರಾ ? ಅವರು ನೋಡಲಿಕ್ಕೆ ಹೇಗಿದ್ದಾರೆ, ? ”

“ ನೋಡಲಿಕ್ಕೆ ಅಷ್ಟೇನು ಎತ್ತರವಿಲ್ಲ. ವಯಸ್ಸು ಮೂವತ್ತಕ್ಕೆ ಬಂದಿರಬೇಕು ಇನ್ನೂ ಲಗ್ನವಾಗಿಲ್ಲ ಮುಖ ಸುಂದರವಾಗಿದ್ದರೂ ಸ್ವಲ್ಪ ಉದ್ದವಿದೆ ಅಷ್ಟೆ. ಅವರ ಗುಣಗಳನ್ನು ನಾನು ಹೇಗೆ ಹೇಳಲಿ. ಅವರು ಸ್ವಭಾವದಿಂದ ಗೆಳೆತನಕ್ಕೆ ತಕ್ಕವರು ಎಂದಿಷ್ಟೇ ಮಾತ್ರ ಬಲ್ಲೆನು. ”

‘ ಅವರು ನಿಮ್ಮನ್ನು ಸದಾ ಭೆಟ್ಟಿಯಾಗುತ್ತಿದ್ದರೇನು ?”

“ ಅಹುದು. ದಿನಾಲು ಒಮ್ಮೆಯಾದರೂ ಇಲ್ಲಿಗೆ ಬಂದು ಹರಟೆ ಹೊಡೆದು ಚಹ ಕುಡಿದು ಹೋಗುತ್ತಿದ್ದರು ”

“ ಗುರುವಾರದ ನಂತರ ನಿಮ್ಮಲ್ಲಿಗೆ ಬಂದಿದ್ದರೇನು ?”

“ ಶುಕ್ರವಾರ ಸಾಯಂಕಾಲ ನಾನೇ ಫೋನ ಮಾಡಿದ್ದೆನು ಮಿಸ್-ಮಾಲಾಳೂ ಅವಳ ತಂಗಿಯೂ ಇವರನ್ನು ಕರೆದುಕೊಂಡು ಹೋಗಿದ್ದರು.”

“ ನಂತರ ”

“ ಶನಿವಾರ ದಿವಸ ನಾನೇ ಊರಲ್ಲಿರಲಿಲ್ಲ. ಪುಣೆಗೆ ಹೋಗಿದ್ದೆ. ’

“ ಆದಿತ್ಯವಾರ ?’

‘ ನಿನ್ನೆಯೇ ಪುಣೆಯಿಂದ ಬೆಳಗಿನಲ್ಲಿ ಬಂದ ನನೇ ನಾನು ಅವರಿಗೆ ಫೋನ ಮಾಡಿದೆ. ರಾಯಲ್ ಓಪೇರಾಕ್ಕೆ ಪೃಥ್ವಿರಾಜನ ನಾಟಕ ನೋಡಲಿಕ್ಕೆ ಬಾ ಎಂದು, ’

“ ಅವರು ಬಂದರೇನು ?”

‘ ಓಹೋ ಸಮಯಕ್ಕೆ ಸರಿಯಾಗಿ ಬಂದರು, ’

‘ ನಾಟಕ ಮುಗಿಯುವವರೆಗೆ ಅವರು ನಿಮ್ಮೊಡನೆಯೇ ಇದ್ದಿಲ್ಲವೇ ?’

‘ ಇಲ್ಲ. ಇಂಟರಬೆಲ್‌ಗೆ ಹೊರಗೆ ಸಿಗರೇಟು ಸೇದುತ್ತಿದ್ದಾಗ ವ್ಹಿ. ಟಿ. ಗೆ ಹೋಗಿ ಬರುತ್ತೇನೆಂದು ಅರ್ಧ ಘಂಟೆಯೊಳಗಾಗಿ ಪುನಃ ಬರುತ್ತೇನೆಂದು ಹೇಳಿದರು. ’

‘ ತಿರುಗಿ ಬಂದರೇನು ನಾಟಕಕ್ಕೆ ?’

‘ ತಿರುಗಿ ಬಂದಾಗ ಕೊನೆಯ ಅಂಕು ನಡೆದಿದ್ದಿತು. ’

“ ಇಂಟರಬೆಲ್ ಆದಾಗ ವೇಳೆ ಎಷ್ಟಾಗಿರಬೇಕು ?”

“ ಹನ್ನೊಂದುವರೆ ಅಷ್ಟೆ. ”

‘ ಕೊನೆಯ ಅಂಕು ಪ್ರಾರಂಭವಾದಾಗ ಎಷ್ಟು ಹೊಡೆದಿರಬೇಕು ?”

“ ಹನ್ನೆರಡುವರೆ ಮೇಲೆ ಆಗಿರಬೇಕು. ”

‘ ನೀವು ಅವರಿಗೆ ಏನಾದರೂ ಕೇಳಿದಿರೇನು ?’

‘ ಇಲ್ಲ. ’

‘ ಅವರ ಮುಖಭಾವವನ್ನಾದರೂ ಲಕ್ಷಿಸಿದರೇನು ?’

“ ಏನೂ ವಿಶೇಷವಾಗಿ ಕಾಣಲಿಲ್ಲ. ಏಕೋ ಬಿಸಿಲಿನಲ್ಲಿ ವೇಗದಿಂದ ಕಾರು ತೆಗೆದುಕೊಂಡು ಹೋಗಿ ಬಂದದ್ದರಿಂದ ಅವರ ಮುಖದ ಮೇಲೆ ಬೆವರಿನ ಹನಿಗಳು ಮೂಡಿದ್ದವು ಕರವಸ್ತ್ರದಿಂದ ಒರೆಸಿಕೊಂಡಾಗ ಮುಖ ಕೆಂಪಾಗಿ ಕಾಣುತ್ತಿತ್ತು ಅಷ್ಟೆ.

‘ ಇಲ್ಲಿಯೇ ಏನೋ ವಿಶೇಷ ಸಂಭವಿಸಿದಂತೆ ರಣಜಿತಲಾಲ ನಂತರ ಸಾಯಂಕಾಲ ನಿಮ್ಮಲ್ಲಿಗೆ ಅವರು ಪುನಃ ಬಂದಿದ್ದರೇನು ?’

‘ ಇಲ್ಲ ’

“ ಈ ದಿನ ಇಷ್ಟೋತ್ತಿನವರೆಗೆ ನಿಮಗೆ ಎಲ್ಲಿಯಾದರೂ ಸಿಕ್ಕಿದ್ದರೇನು ?’

‘ ಇಲ್ಲ ’

‘ ಹಾ ನನ್ನ ತರ್ಕ ಈಗ ಹಳ್ಳದಿಂದ ಹಾದಿಗೆ ಹತ್ತಿದೆ ರತನಲಾಲ ಚಮನಲಾಲರ ಮನೆಯೆಲ್ಲಿದೆ ಹೇಳುತ್ತೀರಾ ?’

“ ಮಲಬಾರ ಹಿಲ್ಲಿನಲ್ಲಿ ಸೇಠ ಮನಹರಲಾಲರ ಮನೆಯೆಂದರೆ ಎಲ್ಲರಿಗೂ ಗೊತ್ತು. ’

‘ ಮನಹರಲಾಲ ಇವರಿಗೇನು ಆಗಬೇಕು ?’

‘ ಅಣ್ಣನಾಗಬೇಕು. ’

‘ ಥ್ಯಾಂಕ್ಸ ರಣಜಿತಲಾಲ ನಿಮಗೆ ತುಂಬಾ ತೊಂದರೆ ಕೊಟ್ಟೆ. ’

‘ ಆದರಲ್ಲೇನು ಬಂದಿತು ಇನ್ಸಪೆಕ್ಟರಸಾಬ. ಏಕೆ ಮಿಸ್‌ಮಾಲಾಳ ಕೊಲೆಯಲ್ಲಿ ಚಮನಲಾಲನ ಕೈಯಿದೆಯೇ ?’

‘ ಹಾಗೆಂದು ಈಗ ಸ್ಪಷ್ಟವಾಗ ಹತ್ತಿದೆ. ’

‘ ಇದೇನು ಗ್ರಹಚಾರ ಒಡಿದುಕೊಂಡಿತು ಆ ಹುಡುಗನಿಗೆ. ’

" ಅವನಿಗೆ ಗ್ರಹಚಾರ ಬಡಿದು ಕೊಳ್ಳುವದಿರಲಿ ನಮಗೂ ಬಡಿದಿದೆ. ಇನ್ನೊಂದು ಪ್ರಶ್ನೆ. ಚಮನಲಾಲನಿಗೆ ದುಡ್ಡೆಲ್ಲಿಂದ ಬರುತ್ತಿತ್ತು ?'

' ಮೊನ್ನೆ ಅವನಿಗೆ ಡರ್ಬಿ ಲಾಟರಿ ಹತ್ತಿದೆ ಅರ್ಧಲಕ್ಷದಷ್ಟು ಅದೇ ಅವನು ತಲೆತಿರುಗಿಸಿರಬೇಕು ಅಷ್ಟೆ. '

' ಆದರೆ ಮನಹರಲಾಲಸೇಠಹಾಗೆ ಖರ್ಚು ಮಾಡಲು ಬಿಡುವದಿಲ್ಲ."

' ಇವನು ಅವರಿಗೆ ಹಣಕೊಟ್ಟರೆ ತಾನೆ ಅವರು ಇವನನ್ನು ಲಗಾಮು ಹಾಕಿ ಕಡ್ರುಸುವದು. '

' ಅದೂ ನಿಜವೇ ಆಗಲಿ ಬರುತ್ತೇನೆ' ಎಂದು ಅಟ್ಟದಿಂದ ಇಳಿದು ಕೆಳಗೆ ಹೋದರು ರಣಜಿತನು ಅವರನ್ನು ಜೀಪಿನಲ್ಲಿ ಕುಳ್ಳಿರಿಸಿ ತನ್ನ ಕೆಲಸಕ್ಕೆ ಮರಳಿದನು.

ಅವನಿಗೆ ಚಮನನ ಚಿಂತೆ ಹತ್ತಿತು. ಈ ಪಿಡುಗೇಕೆ ಅವನನ್ನು ಬಡಿದು ಕೊಂಡಿತು? ಕೇವಲ ಧನಪಿಶಾಚಿಯಿಂದಾಗಿರಲಾರದಷ್ಟೇ? ಆ ಮೋಹಿನಿ ಕೂಡ ಇವನಿಗೆ ಬೂದಿಯನ್ನೂದಿದ್ದಳೇ ಯಾರು ಬಲ್ಲರು ಎಂದುಕೊಂಡ.



## ( ೧೫ )

ಸಿಂಗ ಮಲಬಾರ ಹಿಲ್ಲಿಗೆ ಬಂದು ಸೇಠ ಮನಹರಲಾಲ ಎಲ್ಲಿ ಎಂದು ವಾಚಮನ್ ಸಮದ್‌ನನ್ನು ಕೇಳಿದರು. ಅವನು ಅವರನ್ನು ಒಳಗೆ ಕರೆದುಕೊಂಡು ಹೋಗಿ ದಿವಾಣಖಾನೆಯಲ್ಲಿ ಕೂಡ್ರಿಸಿ ಸೇಠರಿಗೆ ಸುದ್ದೀ ಮುಟ್ಟಿಸಿದನು ಸೇಠರು ಶರಟನ್ನು ಹಾಕಿಕೊಳ್ಳುತ್ತ ಬಂದರೂ.

" ರಾಮರಾಮ ಇನ್ಸಪೆಕ್ಟರಸಾಬ, ಈಕಡೆ ದಯಮಾಡಿಸಿದ್ದರಿ ?'

" ಇದೇ ಇದೆಯಲ್ಲಿ ಪೋಲೀಸರ ಕೆಲಸ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ತಿರುಗುವದು. ನಿಮ್ಮ ಮನೆಯಲ್ಲಿ ಚಮನಲಾಲ ಎಂದು

ನಡೆಯಿತು. ಅಲ್ಲಿಕೂಡ ನೀವು ಹಾಜರಿದ್ದೀರಿ. ನಂತರ ಫ್ಯಾಶನ್ ಪರೇಡಿ
ನಲ್ಲಿ ನಿಮ್ಮಕ್ಕ ಮಾತ್ರ ಭಾಗವಹಿಸಿದಳು, ನೀವು ಭಾಗವಹಿಸಲಿಲ್ಲ ಯಾಕಂ
ದರೆ ಅವರಿಗೆ ಹಣವು ಯಾರಿಂದಲೇ ಬಂದಿತೆಂದು ತಿಳಿಯುತ್ತದೆ. ಅದನ್ನು
ನೀವೇ ನಿನ್ನೆ ನನ್ನ ಮುಂದೆ ಹೇಳಿದ್ದೀರಿ. ಆ ಪರೇಡಿನಲ್ಲಿ ಅವರಿಗೆ ಬಹಳ
ಸನ್ಮಾನ. ದೊರಕಿತು ನೀವು ಲೌಂಜಿನಲ್ಲಿದ್ದೇ ಎಲ್ಲವನ್ನೂ ನೋಡಿದಿರಿ.
ನಂತರ ಮನೆಗೆ ಬಂದಮೇಲೆ ನೀವು ಚನ್ನಾಗಿ ನಿದ್ರೆ ಮಾಡಲಿಲ್ಲ ಆಗಲೇ
ಅವರನ್ನು ಮುಗಿಸಿಬಿಡುವ ವಿಚಾರ ನಿಮಗಿದ್ದಿತು. ಆದರೆ ಅವಳ ಕೂಡ
ಏನೇ ಓದುತ್ತ ಬಹು ಹೊತ್ತಿನವರೆಗೆ ಮಲಗಿರ ಬೇಕೆನಿಸುತ್ತದೆ. ಅಥವಾ
ನೀವೇ ಕೊಲೆಯ ಅಪವಾದವನ್ನು ಬೇರೆಯವರ ಮೇಲೆ ಅಂದರೆ ಕುಕ್‌ಳ
ಮೇಲೆ ಇಲ್ಲವೇ ವಾಚಮನ್ನ ಮೇಲೆ ಹಾಕಿ ಪಾರಾಗಲು ಯೋಚಿಸಿದಿರಿ
ಅದೇ ಕಾರಣದಿಂದಲೇ ಬೆಳಗಿನಲ್ಲಿ ಎದ್ದಂದಿನಿಂದಲೂ ನೀವು ಅವಳನ್ನ
ಗಲಿ ಇರಲೇಇಲ್ಲ ಹತ್ತೂವರೆ ಘಂಟೆಯಸುಮಾರಿಗೆ ಚೂರಿಯನ್ನು ತಕ್ಕೊಂ
ಡು ಹತಾತ್ತನೆ ಮಿಸ್‌ಮಾಲಾಳು ಬಾಗಿಲಿನಲ್ಲಿ ನಿಂತಾಗ ಗಾಯಗೊಳಿಸಿ
ದಿರಿ. ಆಕೆಯ ಕೈಬೆರಳುಗಳನ್ನು ನಾವು ಗುರುತಿಸಿದ್ದೇವೆ. ನಂತರ ಅವಳ
ದೇಹವನ್ನು ನೀವು ಮೆಲ್ಲಗೆ ಎಳೆದುಕೊಂಡು ಹೋಗಿ ಸೋಫಾನ ಹಿಂದೆ
ಮಲಗಿಸಿಬಿಟ್ಟಿರಿ ಜಮಖಾನೆಯನ್ನು ಡಸ್ಟರಿನಿಂದ ಸ್ವಚ್ಛ ಮಾಡಿದಿರಿ. ಸಂ
ಶಯ ಬರುವಹಾಗೆ ಪ್ಲಾವರಪಾಟಿನೊಳಗಿಂದ ಎರಡು ಹೂಗಳನ್ನು ಬಾಗಿ
ಲಿನ ಎದುರಿಗಿನ ಕಮಾನಿನಲ್ಲಿ ಒಗೆದಿರಿ. ಹಾಗೂ ಔಟಿಂಗಿಗೆಂದು ಕಾರನ್ನು
ಜೋರಿನಿಂದ ಉದ್ವಿಗ್ನರಾಗಿ ಸ್ಟಾರ್ಟ ಮಾಡಿಕೊಂಡು ಹೋಗುವಾಗ
ಗೇಟಿಗೆ ಹಾಸಿದಿರಿ, ಆದರಿಂದ ಕದಕ್ಕೂ ನಿಮ್ಮ ಕಾರಿನ ಮೆಟ್‌ಗಾರ್ಡ
ಗೂ ಧಕ್ಕೆಯಾಗಿದೆ. ನಿಮ್ಮತಲೆ ಹಾಗೂ ಮನಸ್ಸು ಶಾಂತವಾಗಲು ಮೂ
ರುತಾಸಿಗಿಂತ ಹೆಚ್ಚಾಗಿ ಕಾಲ ಬೇಕಾಯಿತು. ಎರಡೂವರೆಘಂಟೆಗೆ ಬಂದು
ರಜಾಕನನ್ನು ನೀವೇ ಸ್ವತಃ ಎಬ್ಬಿಸಿ ಅವನನ್ನು ಕಳಿಸಿಕೊಟ್ಟಿರಿ. ಆಮೇಲೆ
ಆರಾಮಾಗಿ ಎರಡು ಸಲ ವಿಚಾರಮಾಡಿ ಮನೆಬಾಗಿಲು ಕೀಲಿ ಹಾಕಿ
ಕೊಂಡು ಬಂದು ಪೋಲೀಸ ಕಚೇರಿಗೆ ಹೋಗಿ ಫಿರ್ಯಾದಿ ಕೊಟ್ಟಿರಿ
ಆದಕ್ಕಿಂತಲೂ 'ನಾನೇ ಕೊಲೆ ಮಾಡಿದ್ದೇನೆ' ಎಂದು ಹೇಳಿದ್ದರೆ ಬಹಳ
ಉಪಕಾರವಾಗುತ್ತಿತ್ತು. ನೀವು ಹಾಗೆ ಮಾಡಲಿಲ್ಲ ನಿಮ್ಮ ತಪ್ಪನ್ನು ಹೆರ
ವರ ಮೇಲೆ ಸರಿಸಿ ನೀವು ಯಿಸಿದಿರಿ. ಇದರಿಂದ ನಿಮಗೆ ದೊರೆ

ತಲಾಭವೇನು ಮಿಸ್‌ಸೋಫಿಯಾ? ಈಗ ಗೃಹಬಂಧನದಲ್ಲಿದ್ದೀರಿ ಇನ್ನರ್ಧ ಘಂಟೆಗೆ ಇಲ್ಲಿಂದಲೇ ಕೈಬೇಡಿ ಹಾಕಿಕೊಂಡು ಹೋಗುತ್ತೀರಿ" ಎಂದವರೇ ಜೇಬಿನಿಂದ ಒಂದು ಜೋಡು ಕೈ ಬೇಡಿಯನ್ನು ಹೊರತೆಗೆದು ತೋರಿಸಿದರು.

ಮಿಸ್ ಸೋಫಿಯಾ ಅವಕ್ಕಾದಳು ಏನೂ ಹೇಳಬೇಕೆಂದು ಅವಳಿಗೆ ತಿಳಿಯಲಿಲ್ಲ. ನಿರಪರಾಧಿಯಾದ ತನ್ನನ್ನು ಪೂರ್ಣ ಅಪರಾಧಿಯಾಗಿ ಪೋಲೀಸರು ಮಾರ್ಪಡಿಸಿದ್ದರಲ್ಲಾ ಎಂದು ಕಳವಳಪಟ್ಟಳು.

ಇನ್ಸಪೆಕ್ಟರರು ಇನ್ನೂ ಮುಂದೆ ಸಾಗಿ ಹೇಳಿದರು "ಮಿಸ್‌ಸೋಫಿಯಾ ಕೊಲೆಯನ್ನು ನೀವೇ ಮಾಡಿರಬಹುದು, ನಿಮ್ಮ ಬುದ್ಧಿಯಿಂದ ಅಥವಾ ಇನ್ನೊಬ್ಬರ ಚಿತಾವಣೆಯಿಂದ ಇಲ್ಲವೆ ನಿಮ್ಮ ಅನುಮತಿಯ ಮೇರೆಗೆ ನಿಮ್ಮ ಉದ್ದೇಶಸಾಧನೆಗಾಗಿ ಅಥವಾ ಅವರ ಲಾಭಕ್ಕಾಗಿ ಇನ್ನೊಬ್ಬರು ಕೊಲೆ ಮಾಡಿರಬೇಕು. ಈ ಕೊಲೆಯಲ್ಲಿ ಇಬ್ಬರು ವ್ಯಕ್ತಿಗಳು ಹೊಣೆಗಾರಿಕೆಯಿಂದ ಕೆಲಸ ನಡೆಯಿಸಿದ್ದಾರೆ ಆ ಇನ್ನೊಬ್ಬ ವ್ಯಕ್ತಿಯ ಹೆಸರು ನೀವು ಹೇಳದೆ ಇದ್ದರೆ ಕೊಲೆಯ ಪೂರ್ಣ ಅಪರಾಧವು ನಿಮ್ಮ ತಲೆಯ ಮೇಲೆಯೇ ಬರುವದು. ಕಾರಣ ನೀವು ಕೊಲೆಯ ಗಳಿಗೆಯಲ್ಲಿ ನಿಮಗೆ ಅಪವಾದದಿಂದ ಹಾಗೂ ಅಪರಾಧದಿಂದ ದುರಾಗಲು ಸಾಧ್ಯವಿದೆ.

"ಅದು ಹೇಗೆ ಸಾಧ್ಯ ಇನ್ಸಪೆಕ್ಟರಸಾಬ? ನೀವು ಎಲ್ಲಿಲ್ಲದ ಮಾಹಿತಿ ಹೇಳುತ್ತಿದ್ದೀರಿ. ಯಾವುದಕ್ಕೆ ವಾವುದೇ ಸಂಬಂಧ ಹಚ್ಚುತ್ತಿದ್ದೀರಿ·

"ನಾನು ನಿಮಗೆ ಮೊದಲೇ ಹೇಳಿದ್ದೇನೆ ಮಿಸ್ ಸೋಫಿಯಾ. ಇರಲಿ ಕೆಲವು ಪ್ರಶ್ನೆಗಳಿಗೆ ಉತ್ತರ ಕೊಡಿರಿ. ನೋಡೋಣ, ಮಿಸ್ ಮಾಲಾಳ ಈಗ ಒಂದೆರಡು ವಾರಗಲ್ಲಿ ವಿಶೇಷವಾಗಿ ಪ್ರತಿದಿನವೂ ತಪ್ಪದೇ ಆಡ್ಡಾಡುವದನ್ನು ನೋಡಿಲ್ಲವೇನು?"

"ನೊಡಿದ್ದೇನೆ."

"ಅವನ್ನೇಕೆ ಇಲ್ಲಿಯ ವರೆಗೆ ನಮಗೆ ಹೆಳಲಿಲ್ಲ?"

'ಹೇಳುವ ಅವಶ್ಯಕತೆ ಇರಲಿಲ್ಲ. ಈಗ ಸಹ ಅದರ ಉಪಯೋಗವಾದೀತೆಂದು ನಾನು ತಿಳಿಯಲಾರೆ.

"ಅದು ಹೇಗೆ ತಿಳಿಯುತ್ತೀರಿ.? ಇರಲಿ ಆ ವ್ಯಕ್ತಿ ಒಬ್ಬನೇ ಅಥವಾ ಒಬ್ಬನಿಗಿಂತ ಹೆಚ್ಚು ಜನರೇ?"

“ ಈ ಹದಿನೈದು ದಿವಸಗಳಲ್ಲಿ ಹೆಚ್ಚಾಗಿ ಸಂಪರ್ಕವಿಟ್ಟುಕೊಂಡ ಜನರೆಂದರೆ ಶ್ರೀಸೌಂಡ ಸ್ಟುಡಿಯೋದವರು, ಫಿಲ್ಮಿಸ್ಥಾನದವರು ಅಷ್ಟೆ.”

“ ಆದರೆ ಆ ಇನ್ನೊಬ್ಬ ವ್ಯಕ್ತಿಯನ್ನು ಮರೆಯಿಸುತ್ತಿದ್ದಿರಲ್ಲ. ”

“ ಓಹೋ ಆ ಇನ್ನೊಬ್ಬ ವಿಚಿತ್ರ ಪ್ರಾಣಿಯೇ ಆ ಹುಂಬ ಹಾಗೂ ಶುಂಭ ನ್ನನ್ನ ನೆನೆಸಿದಾಗ ನಗುಬರುತ್ತದೆ ಅವನ ಹೆಸರು ಏನೋ ನನಗೆ ಗೊತ್ತಿಲ್ಲ ಆದರೆ ಅವನನ್ನು ರಣಜಿತಲಾಲ ರಿಜ್‌ಗೆ ಗುರುವಾರ ದಿವಸ ಕರೆದು ಕೊಂಡು ಬಂದಿದ್ದರು. ”

‘ ಯಾರು ಈ ರಣಜಿತಲಾಲ ಅಂದರೆ ?’

“ ರಣಜಿತ್‌ಲಾಲ ಅಂದರೆ ಅವರೊಬ್ಬ ಶ್ರೀಮಂತರ ಸಿನಿಮಾ ಫೈನಾನ್ಸರರು. ”

“ ಅವರೆಲ್ಲಿ ಇರುತ್ತಾರೆ ?”

‘ ಅವರ ಕಚೇರಿ ಮಾತ್ರ ಹಾರ್ನಬಿ ರೋಡಿನಲ್ಲಿರುತ್ತದೆ. ಅವರ ಮನೆಯ ವಿಳಾಸ ನನಗೆ ಗೊತ್ತಿಲ್ಲ. ’

‘ ಆಗಲಿ ಆ ವ್ಯಕ್ತಿ ಹೇಗಿದ್ದನು ?’

“ ಸುಂದುರಾಗಿದ್ದನು. ಆದರೆ ಮುಖ ಮಾತ್ರ ಉದ್ದಾಗಿ ಗದ್ದವೂ ಚೂಪಾಗಿ ಇಳಿಬಿದ್ದಿತು. ಸೊಗಸಾದ ಬಟ್ಟೆ ಧರಿಸುತ್ತಿದ್ದನು. ಯಾವಾಗಲೂ ನೂರರ ನೋಟನ್ನು ಮುರುಕುತ್ತಿದ್ದನು. ”

‘ ಮಿಸ್ ಮಾಲಾಳೊಂದಿಗೆ ಅವನ ಸಂಬಂಧ ಹೇಗೆ ಬೆಳೆಯಿತು. ’

‘ ಸಂಬಂಧವೇನೂ ಬಂದಿತು ? ಅವನೇ ಇತರ ಮೃಗಗಳಂತೆ ಕ್ಲಬ್ಬಿನಲ್ಲಿ ಹುಡಿಗೆಯರ ಕಾಲಲ್ಲಿ ಕಾಲುಸಿಕ್ಕಿಸಿ ಕುಣಿಯುತ್ತಿದ್ದನು. ಚನ್ನಾಗಿ ಮೇಲಿಂದ ಮೇಲೆ ತಂಪು ಪಾನೀಯ ಕುಡಿಯುತ್ತಿದ್ದನು. ಸಿಗರೇಟು ಸೇದುವದಕ್ಕೆ ಮಿತಿಮಿರಿಲ್ಲ. ’

‘ ಅವನೇ ಕೊಲೆ ಮಾಡಿರಬೇಕೆಂದು ನಿಮಗೆ ಅನುಸುತ್ತದೆಯೇ ?’

‘ ಹಾಗೇನು ಅನಿಸುವದಿಲ್ಲ. ಯಾಕಂದರೆ ಅಂಥವರಲ್ಲಿ ಕಾರ್ಯವೇ ಇರುವದಿಲ್ಲ. ಕೇವಲ ಮೇಣ ಮೂರ್ತಿಗಳಾಗಿರುತ್ತಾರೆ. ಅವರು ಆಟಕ್ಕೆ ಮಾಟವಾಗಿದ್ದು ನೋಟಕ್ಕೆ ಮೋಹರರಾಗಿರುತ್ತಾರೆ ಅಷ್ಟೆ. ’

‘ ನೀವು ತಪ್ಪು ತಿಳಿದುಕೊಂಡಿದ್ದೀರಿ. ಮನುಷ್ಯನು ಒಮ್ಮೆ ನಿರಾಶನಾದನೆಂದರೆ ಅಥವಾ ಅಪಮಾನಗೊಂಡರೆ ಎಂಥಹ ಹೇಡಿಯೂ ವೀರನಾ

ಗುತ್ತಾರೆ. ಹಾಗೂ ಆ ಸನ್ನಿವೇಶದಲ್ಲಿ ದೆವ್ವ ಬಡಿದಂತೆ ಏನು ಮಾಡುವ ದಕ್ಕೂ ಹೆದರುವದಿಲ್ಲ. ಏಕೆಂದರೆ ಅವನಾಗ ಮನುಷ್ಯನಿರುವದಿಲ್ಲ.'

"ಅಂಥ ಮೇಲೆ ನೀವು ಅವರನ್ನು ತನಿಖೆಗೆ ತೆಗೆದುಕೊಳ್ಳಿರಿ. ಹೇಗಾದರೂ ಈ ಪ್ರಕರಣಕ್ಕೆ ಮುಕ್ತಾಯ ಮಾಡಿರಿ." ಎಂದಳು.

"ಮಿಸ್ ಸೋಫಿಯಾ ಎಲ್ಲ ರಾದ್ಧಾಂತ ನಿಮ್ಮೊಬ್ಬರಿಂದಲೇ. ಇನ್ನು ಹನ್ನೆರಡು ಘಂಟೆಯೊಳಗಾಗಿ ಅಪರಾಧವನ್ನು ಪತ್ತೆ ಹಚ್ಚಿ ಬಿಡುತ್ತೇನೆ. ಸಾಕು ನಾನಿನ್ನು ಹೊರಡುತ್ತೇನೆ."

ಎಂದು ಎದ್ದು ಹೊರಟರು.

( ೧೪ )

ಸಿಂಗರು ಒಮ್ಮೆಲೆ ಹಾರ್ನಬಿರೋಡಿಗೆ ಬಂದು ರಣಜಿತಲಾಲನ ಕಚೇರಿಯನ್ನು ಪತ್ತೆ ಹಚ್ಚಿದರು. ಕಚೇರಿಯ ಒಳಗೆ ಹೋಗಿ 'ರಣಜಿತಲಾಲ ಎಂದರೆ ಯಾರು?' ಎಂದು ಕೇಳಿದರು.

"ನಾನೇ ರಣಜತಲಾಲ. ಓಹೋ ಇನ್ಸಪೆಕ್ಟರಸಾಬ. ಬನ್ನಿರಿ ಇಲ್ಲಿ ಕೂಡಿರಿ.' ಎಂದು ರಣಜಿತಲಾಲ ಅವರನ್ನು ಸ್ವಾಗತಿಸಿದನು.

'ಓಹೋ ಒಂದು ಜರೂರ ಕೆಲಸಕ್ಕೆ ಬಂದೆ ನಿಮ್ಮಿಂದ ಈಗ ಒಂದು ಸಹಾಯವಾಗ ಬೇಕಲ್ಲ.

"ಅದೇನು ಹೇಳಿರಿ. ಸಾಧ್ಯವಾದರೆ ನಾನು ಸಿದ್ಧನೇ."

"ಆಗಲಿ. ಅದು ನಿಮ್ಮಿಂದ ಮಾತ್ರವೇ ಸಾಧ್ಯವೆಂದು ನಾನಿಲ್ಲಿಯವರೆಗೆ ಬಂದಿದ್ದೇನೆ."

"ಹಾಗಾದರೆ ಹೇಳಬಹುದು.'

'ಇಲ್ಲಿ ಪ್ರತ್ಯೇಕ ಚೇಂಬರೆ ಇಲ್ಲವೇ?'

ಯಾರಾದರೂ ಇದ್ದಾರೆಯೇ ?"

"ಚಮನಲಾಲ ಅವನು ನನ್ನ ತಮ್ಮನಾಗಬೇಕು"

"ಅವರೇನು ಕೆಲಸ ಮಾಡುತ್ತಾರೆ ?"

"ಏನೂ ಇಲ್ಲ."

"ಅವರನ್ನು ಸ್ವಲ್ಪ ಕರೆಯುತ್ತೀರಾ ?"

"ಅವನಿಲ್ಲ ಊರಲ್ಲಿ"

"ಎಲ್ಲಿಗೆ ಹೋಗಿದ್ದಾರೆ ?"

"ಕಲ್ಕತ್ತೆಗೆ."

"ಕ....ಲ....ಕ....ತ್ತೆ....ಗೆ....!"

"ಹಾ! ಇನ್ಸಪೆಕ್ಟರಸಾಬ ಏಕೆ ಆಶ್ಚರ್ಯಪಡುತ್ತೀರಿ ?"

"ಏನಿಲ್ಲ. ಏನಿಲ್ಲ. ನನ್ನ ಲೆಕ್ಕ ತಪ್ಪಿ ಹೋಗಿದೆ ಅದಕ್ಕೆ ಆಶ್ಚರ್ಯವಾಯಿತು ಇರಲಿ ಸೇಠರೇ, ನಿಮ್ಮ ತಮ್ಮಂದಿರ ಲಗ್ನವಾಗಿದೆಯೇ ?'

'ಇನ್ನೂ ಇಲ್ಲ.'

'ಅವರು ರಾತ್ರಿ ಎಲ್ಲಿ ಹೋಗುತ್ತಾರೆಂದು ನಿಮಗೆ ಗೊತ್ತಿದೆಯೇ?'

"ಈಗಿನ ಹುಡಗರ ಬಗ್ಗೆ ಏನು ನಿರ್ದಿಷ್ಟವಾಗಿ ಹೇಳಲಾಗುತ್ತದೆ. ಶುದ್ಧ ಅವಿವೇಕಿಗಳು.'

'ಅದೆಲ್ಲ ಏಕೆ ಗೋಳು ಹುಯಲ್ಲಕೊಳುತ್ತೀರಿ. ಸೇಠ್. ನನಗೆ ಉತ್ತರ ವದಗಿಸುತ್ತೀರಾ ?"

'ಅವನು ದಿನಾಲು ಯಾವದಾದರೂ ಕ್ಲಬ್ಬಿಗೆ ಸಿನಿಮಾಗೆ ಹೋಗುತ್ತಾನೆಂದು ತೋರುತ್ತದೆ ತಾರೀಖು ಬದಲಾಗದ ವಿನಃ ಅವನು ಮನೆಗೆ ಬಂದು ಮಲಗಲಿಕ್ಕಿಲ್ಲವೆಂದು ಪ್ರತಿಜ್ಞೆಮಾಡಿದಂತೆ ತೋರುತ್ತದೆ.'

"ಇರಲಿ. ನೀವೇ ಅವನಿಗೆ ಹಣ ಒದಗಿಸುತ್ತೀರೇ ?"

"ಇಲ್ಲ ಮನೆಯಲ್ಲಿ ನಮ್ಮ ತಾಯಿಯವರಿಂದ ಕಿತ್ತು ಕೊಳ್ಳುತ್ತಾನೆ"

"ಅವರಿಗೆ ಡರ್ಬಿ ಲಾಟರಿ ಹತ್ತಿದೆಯಂತಲ್ಲ ?'

"ಹೌದು. ಆದರಿಂದ ನಮಗೇನು ಬಂತು ? ಅವನ ಹಣ ಅವನಿಗಾಯಿತು."

'ಹಾಗಾದರೆ ಚುಂದು ಮಾಡಿದರೆಂದು ಕಾಣುತ್ತದೆ ಅಲ್ಲವೆ ?'

"ಹಣವೆಚ್ಚ ಮಾಡುವದೆಂದರೇನು ಸಾಹೇಬ. ಬಂದ ದಿನವೇ

ಹೊಸಕಾರನ್ನು ಖರೀದಿಮಾಡಿಕೊಂಡು ಬಂದುಬಿಟ್ಟ ಎರಡು ದಿವಸ ತಿರುಗಾಡಿ' ದನೊ ಇಲ್ಲವೋ ಕಲ್ಕತ್ತೆಗೆಜರೂರ ಕೆಲಸದ ಮೇಲೆ ಎಂದು ಹೇಳಿ ವಿಮಾ ನದಿಂದ ಹೋಗಿಬಿಟ್ಟ ನನ್ನ ಮಾತನ್ನು ಅವನು ಈಗೀಗ ಕೇಳುತ್ತಲೇ ಇಲ್ಲ'

" ಅದು ನಿಮ್ಮ ಅವರ ನಡುವಿನ ಬಾಂಧವ್ಯ. ನಮಗೆ ಬೇಕಾದದ್ದು ಅದಲ್ಲ ಇನ್ನೊಂದು ಪ್ರಶ್ನೆ ಆದಿತ್ಯವಾರ ಕಲ್ಕತ್ತೆಗೆ ನಿಮ್ಮ ತಂಮ್ಮದಿರು ಬೆಳಗಿನಲ್ಲಿ ವಿಮಾನದಿಂದ ಹೋದರೆ ?"

" ಇಲ್ಲ ಅವನೆಂದು ಬೆಳಗಿನಲ್ಲಿ ಹತ್ತು ಘಂಟೆಯ ಒಳಗೆ ಏಳುವದಿಲ್ಲ'

" ಕಲ್ಕತ್ತೆಗೆ ಹೋಗುವ ಉದ್ದೇಶದಿಂದ ಆದಿನ ಬೇಗ ಎದ್ದಿದ್ದರೆ ?"

' ಹಾಗೇನೂ ಆಗಿಲ್ಲ. ತಪ್ಪು ಭಾವಿಸಿಬೇಡಿರಿ ಅವನು ಮಧ್ಯಾನ್ಹ ನಾಲ್ಕು ಘಂಟೆಗೆ ನನ್ನೊಡನೆ. ವಾದಾಟ ಹೂಡಿದ್ದಾನೆ ರಾತ್ರಿಯಲ್ಲಿಯೇ ಪ್ರಯಾಣ ಮಾಡುತ್ತೇನೆಂದು ನನ್ನ ಮಾತು ಕೇಳದೆ ಟ್ಯಾಕ್ಸಿ ತರಿಸಿಕೊಂ ಡು ಸಾಯಂಕಾಲವೇ ಹೊರಟು ಹೋಗಿದ್ದಾನೆ. '

" ಹೀಗೇನು. ಆದಿತ್ಯವಾರ ಮಧ್ಯಾನ್ಹ ಮನೆಗೆ ಎಷ್ಟು ಘಂಟೆಗೆ ಬಂದಿದ್ದರೂ. "

" ಮಧ್ಯಾನ್ಹ ನಾನು ಬರುವ ಹೊತ್ತಿಗೆ ಬಂದು ಊಟಮಾಡಿ ಮಲ ಗಿಕೊಂಡಿದ್ದ ನಮ್ಮ ವಾಚಮನ್ ಸಮದನನ್ನು ಕೇಳಿದರೆ ನಿಮಗೆ ಸರಿ ಯಾದ ಮಾಹಿತಿ ದೊರಕೀತು. '

" ಅವನನ್ನು ಕೇಳೋಣ ಹಾಗಾದರೆ. ಇನ್ನೊಂದು ಕೆಲಸದಲ್ಲಿ ಸಹಾ ಯ ಮಾಡಿರಿ. ಸೇಠ ನೀಮ್ಮ ತಮ್ಮಂದಿರ ಇತ್ತೀಚಿನ ಒಂದು ಫೋಟೋ ಇದ್ದರೆ ಕೊಡುತ್ತೀರಾ ?'

" ಓಹೊ ಅದಕ್ಕೆನು ಅವನದೇ ಒಂದು ಕ್ಯಾಮರಾಅದೆ. ಅಂದಮೇಲೆ ಮನೆಯಲ್ಲಿ ಫೋಟೋಗಳಿಗೇನು ಕಡಿಮೆ. " ಎಂದು ಅವರನ್ನು ಕರೆದು ಕೊಂಡು ಚಮಲಾಲನ ಕೋಣೆಗೆ ಕರೆದೊಯ್ದಿರು ಅಲ್ಲಿ ಗೋಡೆಯ ಮೇ ಲೆ ವಿವಿಧ ಭಂಗಿಗಳಲ್ಲಿ ಚಮಲಾಲನ ಫೋಟೋಗಳು ಅಲಂಕೃತವಾಗಿ ಚೌಕಟ್ಟಿನಲ್ಲಿ ಕಂಗೊಳಿಸುತ್ತಿದ್ದವು ಸಿಂಗರು ತಮ್ಮ ಪ್ಯಾಂಟಿನ ಎರಡೂ ಜೇಬಿನಲ್ಲಿ ಕೈಸಿಕ್ಕಿಸಿ ಒಂದೊಂದೇ ಫೋಟೋವನ್ನು ಎರಡೆರಡು ನಿಮಿಷ ಅವಲೋಕಿಸುತ್ತ ನಡೆದರು. ನಂತರ ರೂಮಿನ ನಿರೀಕ್ಷಣೆ ಮಾಡಿದರು. ಹಾಗೂ ಸೇಠ ಮನಹರಲಾಲನನ್ನು ಕೇಳಿದರು.

'ಸೇಠರೇ. ನಾನು ಈ ಕೋಣೆಯನ್ನು ಸ್ವಲ್ಪ ಕಿತ್ತಾಡುತ್ತಿದ್ದೆನೆ. ನೀವು ಇಲ್ಲಿಯೇ ಸೋಫಾದಮೇಲೆ ಕುಳಿತುಕೊಳ್ಳಿರಿ "

'ಏಕೆ ಇದೆಲ್ಲ ಇನ್ಸಪೆಕ್ಟರಸಾಬ ?'

'ಏನಿಲ್ಲ ಒಂದು ಕೇಸಿಗಾಗಿ ನಾನು ಬಂದಿದ್ದೇನೆ. ಇಲ್ಲಿ ಏನಾದರೂ ಸಾಕ್ಷಿಸಿಕ್ಕೀತೇ ಎಂದು ಹುಡುಕಾಡುತ್ತಿದ್ದೇನೆ ಅಷ್ಟೆ.'

'ಯಾವ ಕೇಸಿಗಾಗಿ ಇನ್ಸಪೆಕ್ಟರಸಾಬ ?'

'ಖೂನಿ ಕೇಸಿಗಾಗಿ. "

'ರಾಮರಾಮ ಇಲ್ಲಿ ಏನು ಸಾಕ್ಷಿ ದೊರೆತೀತು ಇನ್ಸಪೆಕ್ಟರಸಾಬ ?'

'ಇಲ್ಲಿ. ಸಿಗಲಿಕ್ಕೇಬೇಕೆಂದು ಬಂದಿದ್ದೇನೆ. ಈಗ ಸ್ವಲ್ಪ ಅವಕಾಶ ಕೊಡಿರಿ.' ಎಂದು ಎಲ್ಲ ಕಪಾಟು ಮೇಜುಗಳನ್ನು ಕಿತ್ತಿಹಾಕಿ ಪುಸ್ತಕದ ಹಾಳೆಗಳೆಲ್ಲವನ್ನು ಪುಟದಿಂದ ಪುಟಕ್ಕೆತಿರುವಿ ಹಾಕಿದರು. ಬಟ್ಟೆಬರೆ ಹಾಕಿದ್ದ ಕಪಾಟಿನ ಥೋಳಿಯನ್ನು ಹಾರಿಸಿದರೂ ಏನೂ ಸಿಗಲಿಲ್ಲ. ಕೊನೆಗೆ" ಆಗೊ ಸೇಠರೇ ಈ ಮೂರು ಫೋಟೋ ನಾನು ಒಯ್ಯುತ್ತೇನೆ ನಿಮಗೆ ನಂತರ ಸಾಧ್ಯವಾದರೆ ತಂದು ಕೊಡುತ್ತೇನೆ ಎಂದರು.

ಸೇಠರು ಅದನ್ನು ಕೇಳಿ ನಕ್ಕು 'ತಕ್ಕೊಂಡು ಹೋಗಿರಿ ಇನ್ಸಪೆಕ್ಟರ ಸಾಬ ಆದರೆ ನೀವು ಮುಖ್ಯ ವಿಷಯವನ್ನೇ ಹೇಳಲಿಲ್ಲವಲ್ಲ ?" ಎಂದು ಕೇಳಿದರು.

" ಇಲ್ಲ ನಿಮ್ಮ ಮುಂದೆ ಈಗ ಅದೆಲ್ಲ ಹೇಳುವದು ಯೋಗ್ಯವಾಗಲಿಕ್ಕಿಲ್ಲ. ಹಾಗು ಇನ್ನೊಂದು ರೀತಿಯಿಂದ ನಿಮಗೆ ವೃಥಾ ಮನೋವ್ಯಥೆಗೆ ಕಾರಣವಾದೀತು. "

" ಇಂಥ ತಮ್ಮಂದಿರು ಹುಟ್ಟಿದ್ದರೆಂದ ಮೇಲೆ ಎಲ್ಲವನ್ನು ಅನುಭವಿಸಲಿಕ್ಕೆ ಸಿದ್ಧರಿರಬೇಕಲ್ಲವೇ ಇನ್ಸಪೆಕ್ಟರಸಾಬ ? ಏನುಚಮುನನೇ ಈ ಖೂನಿಯಲ್ಲಿ ಇದ್ದಾನೆಯೇ ಅಥವಾ ಅವನದೆ ಖೂನಿಯಾಗಿದೆಯೇ ?"

" ಅವನದೇನೂ ಖೂನಿಯಾಗಿಲ್ಲ. ಅವನೇ ನಮ್ಮ ಕೈಯಲ್ಲಿರುವ ಕೇಸಿನಲ್ಲಿ ಅಪರಾಧಿಯೆಂದು ಕಾಣ ಬರುತ್ತದೆ. ಅದಕ್ಕಾಗಿ ಸ್ವಲ್ಪ ನಿಮಗೆ ತೊಂದರೆ ಕೊಡಬೇಕಾಗಿದೆ ಇರಲಿ. ಚಮನಲಾಲರ ಕಲ್ಕತ್ತೆಯ ಅಡ್ರೆಸ ಕೊಡುತ್ತೀರಾ ?"

" ನನಗೆ ಅಡ್ರೆಸ್ ಕೊಟ್ಟಿಲ್ಲ. ಯಾವಾಗ ತಿರುಗಿ ಬರುತ್ತೇನೆಂದೂ

ಹೇಳಿಲ್ಲ, ”

“ ಬಹಳ ವಿಚಿತ್ರರಿದ್ದಾರೆ ಚಮನಲಾಲ. ಇರಲಿ. ಸಮದನನ್ನು ಕ ರೆಯಿರಿ.

ಸಮದ ಬಂದು ಸಲಾಂ ಮಾಡಿ ಬಾಗಲಿನಲ್ಲಿಯೇ ನಿಂತುಕೊಂಡ ಆದ ರೆ {ಸಿಂಗರೇ ಅವನನ್ನು ಒಳಗೆ ಕರೆದರು, ಹಾಗೂ ಅವನಿಗೆ ಕೇಳಿದರು, ಚಮನಲಾಲ ದಿನಾಲು ಎಷ್ಟೊತ್ತಿಗೆ ಮನೆಗೆ ಬರುತ್ತಾರೆ ?”

‘ ಅವರದು ಗೊತ್ತಿನದಲ್ಲ ರಾವಸಾಬ, ’

‘ ಆದಿತ್ಯವಾರ ಮಧ್ಯಾನ್ಹ ಎಷ್ಟೊತ್ತಿಗೆ ಬಂದರೆಂದು ನೆನೆಪಿದಿಯೇ?’

‘ ಆದಿತ್ಯವಾರ ಮಧ್ಯಾನ್ಹ ಮನೆಗೆ ಬಂದಾಗ ಒಂದೂವರೆ ಆಗಿರಬೇಕು ರಾವಸಾಬ, ’

“ ಅವರು ತಿರುಗಿ ಕಲ್ಕತ್ತೆಗೆ ಹೊರಟಾಗ ”

“ ಐದು ಘಂಟೆಯ ಮೇಲೆ ಆಗಿರಬೇಕು ರಾವಸಾಬ, ”

“ ನೀವೇ ವಿಮಾನದ ವರೆಗೆ ಕಳಿಸಿ ಬಂದಯೇನು ?”

‘ ಇಲ್ಲ ರಾವಸಾಬ ನಾನು ಟ್ಯಾಕ್ಸಿ ತಂದಕೊಟ್ಟು ಅವರ ಸಾಮಾನ ಹಾಕಿ ಅವರು ಹೋದ ಮೇಲೆ ಗೇಟನಿಂದ ಒಳಗೆ ಬಂದೆ ರಾವಸಾಬ. ’

‘ ನಿನಗೆ ಟ್ಯಾಕ್ಸಿಯು ಗುರ್ತೇನನಾದರೂ ಆದೆಯೇ ?’

“ ಇಲ್ಲ ರಾವಸಾಬ. ಯಾವದೇ ಒಂದು ಟ್ಯಾಕ್ಸಿ ಹೋಗುತ್ತಿತ್ತು. ಚಪ್ಪಾಳೆ ಬಾರಿಸಿ ಡ್ರಾಯ್ವರನನ್ನು ಕೇಳಿದ. ಅವನು ಒಮ್ಮೆಲೆ ಹೊರಡಿಸಿ ಕೊಂಡು ಬಂದು ಬಿಟ್ಟ. ”

“ ಟ್ಯಾಕ್ಸಿ ಸಣ್ಣದಿತ್ತೋ, ದೊಡ್ಡದಿತ್ತೋ ?”

“ ಸಣ್ಣದಿತ್ತು ರಾವಸಾಬ, ’

“ ಎಂಥ ಬಣ್ಣದಿತ್ತು ?”

‘ ಕಪ್ಪು-ನೀಲಿ ಬಣ್ಣದ್ದಿತ್ತು ರಾವಸಾಬ, ’

ಇನ್ಸಪೆಕ್ಟರ ಸಿಂಗ ಕುರ್ಚಿಯಿಂದೆದ್ದು ‘ಆಗಲಿ ಮನಹರಲಾಲ ನಾ ನಿನ್ನು ಬರುತ್ತೇನೆ. ತೊಂದರೆ ಕೊಟ್ಟದ್ದಕ್ಕಾಗಿ ಕ್ಷಮಿಸಿರಿ, ’

“ ಓಹೋ ನೀವು ನಿಮ್ಮನ್ನು ಕ್ಷಮಿಸುವದೆಂದರೇನು ಇನ್ಸಪೆಕ್ಟರಸಾ ಬ ನಿಮ್ಮ ಕೆಲಸ ನೀವು ಮಾಡುತ್ತಿದ್ದೀರಿ. ” ಎಂದು ಬನಿಯಾನಗೆಯುನ್ನು ನಕ್ಕರು.

ಇನ್ಸಪೆಕ್ಟರರು ಜೀಪ ಹತ್ತಿಕೊಂಡು ವೇಗದಿಂದ ಹೊರಟು ಹೋದರು

( ೧೬ )

ಸಿಂಗರು ನೆರವಾಗಿ ಕಚೇರಿಗೆ ಬಂದು ವಿಚಾರಲ್ಲಿ ಬಂದದ್ದವರಂತೆ ಕುಳಿತು ಬಿಟ್ಟರು. ಒಂದಾದ ನಂತರ ಒಂದು ಫೈಲು ಕಾಗದಗಳು ಸಹಿಯಾಗಿ ಬರುತ್ತಿದ್ದವು. ಅವೆಲ್ಲವನ್ನು ನೋಡಿ ಅವರು ಕ್ಲಾರ್ಕನನ್ನು ಕರೆದು "ಜರೂರ ಕಾಗದಗಳನ್ನಷ್ಟೇ ಕೊಡಿರಿ. ಅವನ್ನಷ್ಟೇ ಕಳಿಸಿ ಬಿಡೋಣ. ಉಳಿದವನ್ನು ನಾನು ಹೋಗುವಾಗ ಜೀಪಿನಲ್ಲಿ ಹಾಕಿ ಬಿಡಿರಿ." ಎಂದರು.

'ಹಾಗೆ ಆಗಲಿ ರಾವಸಾಬ.' ಎಂದು ಕ್ಲಾರ್ಕ ಕೆಲವು ಕಾಗದ ಪತ್ರಗಳನ್ನು ಹುಡುಕಿ ಅವುಗಳನ್ನು ಸಹಿ ಮಾಡಿಸಿ, ಉಳಿದ ಫೈಲುಗಳನ್ನು ಹೊತ್ತುಕೊಂಡು ತನ್ನ ಕೋಣೆಯ ಕಡೆಗೆ ಹೋದನು.

ಇನ್ಸಪೆಕ್ಟರರು ಕೊನೆಯ ಒಂದು ರೂಪರೇಖೆ ತಯಾರಿಸಿದರು. ಆದಿತ್ಯವಾರ ಹನ್ನೊಂದುವರೆ ಘಂಟೆಯಿಂದ ಒಂದು ಘಂಟೆಯ ವರೆಗಿನ ಅವಧಿಯಲ್ಲಿ ಏನೂ ನಡೆಯುವದು ಸಾಧ್ಯವಿತ್ತು ಎಂದು ತರ್ಕಿಸಿದರು. ರಾಯಲ್ ಓಪೇರಾದಿಂದ ಮರಿನ ಡ್ರಾಯವ್ಹಿಗೆ ಕಾರಿನಲ್ಲಿ ಹೋದಾಗ ಹನ್ನೆರಡು ಹೊಡೆಯಲಿಕೆ ಬಂದಿರಬೇಕು. ಅಲ್ಲಿ ಸಂಭಾಷಣೆ ಹತ್ತು ನಿಮಿಷಕ್ಕಿಂತಲೂ ಹೆಚ್ಚು ನಡೆದಿರಲುಗತ್ಯವಿಲ್ಲ. ನಂತರ ಕೊಲೆ ನಡೆದು ಹೊಗಿರಬೇಕು. ಹೆಣದ ಪತ್ತೆ ಹೊರಗಿನಿಂದ ಬಂದವರಿಗೆ ಆಗಬಾರದೆಂಬ ಉದ್ದೇಶದಿಂದ ಒಳಗೆ ಎಳೆದುಕೊಂಡು ಹೋಗಿ ಸೋಫಾದ ಹಿಂದೆ ಹಾಕಿರಬೇಕು. ಹಾಗೂ ಕೊಲೆ ಘಾತಕಿಯು ಪೋಲೀಸರಿಗೆ ದೂರದ ಸಂಶಯ ಹಚ್ಚಿ ಒಂದು ಸ್ಯಾಂಡಲನ್ನು ಒಯ್ದಿರಬೇಕು. ಹಾಗೂ ಆ ಸ್ಯಾಂಡಲ ಹುಡುಕಿಸುವದರಲ್ಲಿಯೇ ಪೋಲೀಸರ ಶ್ರಮ ಹಾಗೂ ವೇಳೆ ವ್ಯರ್ಥವಾ

ಗುವಂತೆಯು ಆ ವೇಳೆಯಲ್ಲಿಯೇ ಪರಾರಿಯಾಗಲು ಅನುಕೂಲವಾಗು ವಂತೆಯೇ ನೋಡಿಕೊಳ್ಳುವ ಉದ್ದೇಶ ಇರಬೇಕು ಆ ವ್ಯಕ್ತಿ ಕಾರಿನಲ್ಲಿಯೇ ಇಷ್ಟೆಲ್ಲ ಕೆಲಸ ಮಾಡಿರಬೇಕು. ಆ ವೇಳೆಗೆ ಮನೆಯಲ್ಲಿ ಯಾರೂ ಇಲ್ಲದುದು ಅವನಿಗೆ ಒಳ್ಳೇ ಸಂದರ್ಭವಾಗಿರಬೇಕು. ನಂತರ ಸಂಶಯ ಬರದಂತೆ ನಾಟಕಕ್ಕೆ ಹೋಗಿ ಕುಳಿತುಕೊಂಡು ನಿರಪರಾಧಿಯಂತೆ ಸಾಕ್ಷಿ ಹೇಳಲು ನಾಟಕದ ತಿಕೀಟನ್ನಾದರೂ ಇಲ್ಲಿಯ ವರೆಗೆ ಕಾಯ್ದಿಟ್ಟುಕೊಂಡಿರಬೇಕು ಸಾಯಂಕಾಲ ಏನೋ ಒಂದು ನೆವದಿಂದ ವಿಮಾನದಲ್ಲಿಯೇ ಪಾರಾಗಿ ಹೋಗಿರಬೇಕು. ಇನ್ನೇ ಕಲ್ಕತ್ತೆಯಲ್ಲಿ ಅವನನ್ನು ಹುಡುಕಿಸುವದೆಂದರೆ ಈ ಕೇಸನ್ನು ಅನಿಯಮಿತ ಅವಧಿಯವರೆಗೆ ಮುಂದೆ ತಳ್ಳಿದಂತೆಯೇ ಸರಿ.

ಅಷ್ಟರಲ್ಲಿ ಚಂದ್ರಮೋಹನ ರಾಯ ಚೀಟಿ ಕಳಿಸಿದ ಒಳಗೆ ಬಂದ ನಂತರ ಕೈಗಡಿಯಾರ ನೋಡಿಕೊಂಡು ' ಕ್ಷಮಿಸಿರಿ ಇನ್ಸಪೆಕ್ಟರ ನನಗೆ ತುಂಬಾ ತಡವಾಯಿತು. ಐದು ಘಂಟೆಗೆ ಬರಲಿಕ್ಕಾಗಲಿಲ್ಲ.

" ಪರವಾಯಿಲ್ಲ ನಾನು ಇದೀಗ ಬಂದು ಕುಳಿತು ಹತ್ತುಮಿನಿಟಾಯಿತು ಅಷ್ಟೆ. ಇರಲಿ ನೀವು ಹೋದಕೆಲಸವೇನಾಯಿತು. ?"

" ನಾನು ರಿಜ್‌ಗೆ ಹೋಗಿ ಎಲ್ಲವನ್ನು ಚವಕಶ ಮಾಡಿದೆ. ಆದರೆ ನಮಗೆ ಬೇಕಾದ ವಿಷಯವೇನೂ ಸಿಗಲಿಲ್ಲ. "

" ಹೀಗೆ. ಹಾಗಾದರೆ ಇನ್ನು ಬೇರೆ ದಾರಿಯನ್ನಾದರೂ ಇಬ್ಬರೂ ಕೂಡಿಯೇ ಶೋಧಿಸೋಣ ನಿವೆನ್ನನ್ನುತ್ತಿರಿ ಇದಕ್ಕೆ ?"

' ನೀವು ಹೇಳುವದು ನಿಜ '

ಫೋನಕಾಲ ಬಂದಿತು. ಸಿಂಗ ರಿಸೀವರನೆತ್ತಿಕೊಂಡು ಕೇಳಿದರು.? ಆಗಲಿ ' ಎಂದುಕೊಂಡು ರಿಸೀವರ ಕೆಳಗಿದ್ದು ಕೊಂಡರು. ನಂತರ ಚಂದ್ರ ಮೋನ ರಾಯನನ್ನು ಉದ್ದೇಶಿಸಿ ' ನಡೆಯಿರಿ ಮಿಸ್ಟರ ರಾಯ್. ಇನ್ನೊಮ್ಮೆ ನಾವೂ ಕೂಡಿಯೇ ಆ ಮನೆಯನ್ನು ನೋಡೋಣ. ಏನಾದರೂ ಪತ್ತೆಯಾದರೆ ಸಾರ್ಥಕವಾದೀತು. '

" ನಾನು ಮುಂಜಾನೆಯೇ ಹತ್ತು ಘಂಟೆಗೆ ಅಲ್ಲಿ ಹೋಗಿ ಬಂದಿದ್ದೇನೆ. ನನಗೇನೂ ಹೊಳೆಯಲಿಲ್ಲ. "

" ಹಿಗೇನು ಏನು ವರದಿಗಾರರಪ್ಪಾ. ನನಗಿಂತ ಮೊದಲೇ ತನಿಖೆ ನಡೆಯಿಸಿ ಬಂದಿದಾರೆ. "

" ಹೊಂ ಸಾಧ್ಯವಾದಷ್ಟು ಬೇಗನೇ ಸಮಾಚಾರ ಶೋಧಿಸುವದು ನಮ್ಮ ಕೆಲಸ ಆದನ್ನು ನಾವು ಪ್ರವೇಸಲೇಬೇಕು. "

" ಇನ್ನೊಮ್ಮೆ ಹೋಗೋಣ ನಡೆಯಿರಿ. " ಎಂದು ರಾಯನ ಬೆನ್ನು ಕಟ್ಟಿಕೊಂಡು ಹೋದರು. ಹೊರಗೆ ಹೋಗಿ ' ಒಂದು ನಿಮಿಷ ಮಿಸ್ಟರ ರಾಯ್ ಕ್ಲಾರ್ಕಗೆ ಸ್ವಲ್ಪ ಸೂಚನೆ ಹೇಳಿ ಬರುತ್ತೇನೆ. ನಾನು ತಿರುಗಿ ಬರುವದಿಲ್ಲವೆಂದು ' ಎಂದು ಒಳಗೆ ಹೋದರು.

## ( ೧೭ )

ಮರುಕ್ಷಣದಲ್ಲಿಯೇ ಹೊರಗೆ ಬಂದು ನಿಮ್ಮ ಕಾರು ಎಲ್ಲಿಗೆ ಮಿಸ್ಟರ ರಾಯ್ ? ಎಂದು ಕೇಳಿದರು.

' ಟ್ಯಾಕ್ಸಿ ಸಿಗುತ್ತಿರುವಾಗ ಕಾರೇಕೆ ನನಗೆ ಸಾಹೇಬರೇ ?' ಎಂದು ರಾಯ್.

' ಓಹೊ. ಹಾಗಾದರೆ ನನ್ನ ಜೀಪಿನಲ್ಲಿ ಹೋಗೋಣ ನಡೆಯಿರಿ. '

ಜೀಪ ಮಯೂರ ವಿಲಾಸಕ್ಕೆ ಬಂದು ನಿಂತಿತು. ಸೆಂಟ್ರಿಗಳು ಸಲಾಂ ಹೊಡೆದರು. ಜೀಪನ್ನು ಕಮಾನಲ್ಲಿರಿಸಿ ಸಿಂಗ ಒಳಗೆ ಹೋದರು. ಆದರೆ ಚಂದ್ರಮೋಹನ ರಾಯ್ ಮಾತ್ರ ಜೀಪಿನಲ್ಲಿಯೇ ಕುಳಿತು ಸಿಗರೇಟ ಹಚ್ಚಿದ. ದಿವಾಣಖಾನೆಯಲ್ಲಿ ಇಲೆಕ್ಟ್ರಿಕ್ ದೀಪದ ಬೆಳಕು ಪಸರಿಸಿತ್ತು. ಮಿಸ್ ಸೋಫಿಯಾ ಎದ್ದು ಬಂದು ಸಿಂಗರನ್ನು ಸ್ವಾಗತಿಸಿದಳು. ' ನಾನು ನಿಮಗೆ ಮೂರು ನಾಲ್ಕು ಬಾರಿ ಫೋನ ಮಾಡಿದೆ. '

" ಈಗೇನು. ನಾನು ನಿಮ್ಮ ಕೇಸಿನ ವಿಷಯಕ್ಕೆ ತಿರುಗಾಡಹತ್ತಿದ್ದೇನೆ. ಕಚೇರಿಯ ಕೆಲಸ ಕೂಡ ಹಾಗೆಯೇ ಬಿದ್ದು ಬಿಟ್ಟಿದೆ. "

' ಏನಾದರೂ ಪತ್ತೆಯಾಯಿತೇನು ?'

‘ ಇನ್ನೂ ಪೂರ್ಣ ಇಲ್ಲ. ’

‘ ಆಗುವ ಲಕ್ಷಣಗಳೇನಾದರೂ ’

‘ ನಿಮಗೆ ಹೇಗೆ ತೋರುತ್ತದೆ ?’

‘ ನೀವು ಪ್ರಯತ್ನ ಪಟ್ಟರೆ ನಾಳೆಯೊಳಗಾಗಿಯೇ ಅಪರಾಧಿಯನ್ನು ಬೇಡಿ ಹಾಕಿ ಬಂಧಿಸಬಹುದು. ’

‘ ಶಬಾಶ್. ಹೊಸ ವಿಚಾರ. ಅದನ್ನೇ ಹೇಳಲಿಕ್ಕೆ ಕರೆದಿದ್ದರೇನು?’

‘ ಅಹುದು. ಮುಂಜಾನೆಯಿಂದ ಅದೇ ಕಾರಣಕ್ಕಾಗಿ ಮೇಲಿಂದ ಮೇಲೆ ನಿಮಗೆ ಫೋನ ಮಾಡಬೇಕಾಯಿತು. ’

‘ ಓ. ಥ್ಯಾಂಕ್ಸ್. ವಿಷಯವೇನೆಂಬುದನ್ನು ಹೇಳುತ್ತೀರಾ ?’

“ ಈ ದಿನ ಮುಂಜಾನೆ ಒಬ್ಬ ಪೇಪರ ರಿಪೋರ್ಟರ ಬಂದಿದ್ದ. ಅವನು ನಮ್ಮ ಅಕ್ಕನ ಕೊಲೆಯ ವಿಷಯದಲ್ಲಿ ಹೆಚ್ಚು ಆಸ್ಥೆಯಿಂದ ಕೇಳಿದ ”

“ ಹೀಗೇನು; ಅವನು ಕೇಳಿದ್ದರಲ್ಲಿ ದೋಷವಿಲ್ಲ. ”

“ ನಾನೂ ಅದನ್ನು ಒಪ್ಪುತ್ತೇನೆ ಆದರೆ ನಾನು ಹೇಳುವದು ಅವನಲ್ಲಿರುವ ವಿಚಿತ್ರ ನಡೆವಳಿಕೆಯನ್ನು. ’

“ ಅಂದರೆ ಅವನೇನು ನಿಮ್ಮ ಮೇಲೆ ಪೀಡಿಸಿದನೇ ಮಾಹಿತಿಗಾಗಿ?”

“ ಇಲ್ಲ ಐದು ಹತ್ತು ನಿಮಿಷಗಳಲ್ಲಿಯೇ ನಿರಾಶನಾಗಿ ಹೋಗಿಬಿಟ್ಟ.”

“ ಅಂದರೆ ?”

“ ನಾನೂ ಏನೂ ಉತ್ತರವನ್ನೇ ಕೊಡಲಿಲ್ಲ ಅವನ ಪ್ರಶ್ನೆಗಳಿಗೆ.’

“ ಏಕೆ ?’

“ ನಾನೂ ಗೃಹಬಂದಿಯಾಗಿರುವಾಗ ಹಾಗೂ ಅಪರಾಧವು ನನ್ನ ಮೇಲೆಯೇ ದೃಢೀಕರಿಸಲ್ಪಡಲು ಯತ್ನನಡೆದಾಗ ಸುಳ್ಳು ಹೇಳುವದು ಹಾಗೂ ಸತ್ಯ ಹೇಳುವದು ಅಷ್ಟು ಯೋಗ್ಯವಾಗಲಾರದು ಎಂದೆ.’

“ ಬೇಷ್. ಅಂತೂ ಆ ಪೀಡೆಯನ್ನು ತೊಲಗಿಸಿದಿರಿ. ’

“ ತೊಲಗಿಸಿಲ್ಲ. ನಿಮ್ಮ ತಲೆಗೆ ಕಟ್ಟುತ್ತಿದ್ದೇನೆ. ಮುಂದಿನ ಕೆಲಸ ನೀವು ಮಾಡಿರಿ. ”

“ ಅಂದರೆ ಯಾವ ಪತ್ರಿಕೆ, ಅವನ ಮುಖಚರ್ಯವೇನೂ ನನಗೆ ಹೇಳಲಿಲ್ಲ ಅಂದಮೇಲೆ ನಾನೂ ಈ ಮುಂಬಯಿ ತುಂಬ ಹೇಗೆ ಶೋಧಿಸಲಿ?”

“ ಇರಲಿ ಹೇಳುತ್ತೇನೆ ಇದೋ ಅವನುಕೊಟ್ಟ ವ್ಹಿಜಿಟಿಂಗ್ ಕಾರ್ಡು

ಅವನ ಮುಖಚರ್ಯೆಯೆಂದರೆ ಸಾಧಾರಣ ಎತ್ತರ ಇದ್ದಾನೆ. ಫ್ರೆಂಚ್ ಬುಶ್ ಶರ್ಟ ಹಾಕಿದ್ದನು ಕಣ್ಣಿಗೆ ತಂಪಿನ ಕನ್ನಡಿಕ ಹಾಕಿದ್ದನು ಬಾಯ ಲ್ಲಿ ಸದಾ ಉರಿಯುತ್ತಿದ್ದ ಚಿರೂಟು. ಅವನು ಮಾತನಾಡುವಾಗಲೂ ಅದ ನ್ನು ಹಲ್ಲಿನಲ್ಲಿ ಕಚ್ಚಿಯೇ ವಿಕಾರವಾಗಿ ಬಾಯಿ ಸೊಟ್ಟ ಮಾಡಿ ಮಾತನಾ ಡುತ್ತಿದ್ದನು. ಮುಖದಮೇಲೆ ಎರೇಲ್ ಫ್ಲಿನ್‌ನಂತೆ ಸಣ್ಣಗೆ ನಸುಗೆಂಪು ಬಣ್ಣದ ಮೀಸೆ ಗಡ್ಡಗಳನ್ನು ಬಿಟ್ಟಿದ್ದನು.' .

"ಇದರಲ್ಲಿ ವಿಶೇಷವೇನು ಬಂದಿತು ಮಿಸ್‌ಸೋಫಿಯಾ ?'

"ಅವನೇ ಕೊಲೆಗಾರ ನಿರಬೇಕೆಂದೆನಿಸುತ್ತದೆ."

'ಛಿ ಛಿ ಉಂಟೇ ಪತ್ರಿಕೋದ್ಯಮಿ ಅದೂ ಮುಂಬಯಿಗೆ ಬಂದು ಮೂ ರು ತಿಂಗಳಲ್ಲಿ ತನ್ನ ಕೆಲಸ ಬಿಟ್ಟು ಈ ಕಾರ್ಯ ಮಾಡಲು ಸಾಧ್ಯವಿದೆಯೇ?'

'ನನಗನಿಸುತ್ತದೆ. ಅವನು ನಕಲೀ ಇರಬೇಕು.'

'ಅದನ್ನು ಹೇಗೆ ನಿಶ್ಚಿತವಾಗಿ ಹೇಳುತ್ತೀರಿ ?'

"ಅವನು ಕನ್ನಡಕ ತೆಗೆಯಲಿಲ್ಲ ಯಾರಾದರೂ ಮನೆಯಲ್ಲಿ ಒಳಗೆ ಕುಳಿತಾಗ ತಂಪಿನ ಕನ್ನಡಕ ಹಾಕಿಕೊಂಡಿರುತ್ತಾರೆಯೇ ?"

'ಅದು ಅವರ ದೃಷ್ಟಿಯ ಕನ್ನಡಿಕವಿರಬೇಕು.'

'ಅದು ದೃಷ್ಟಿಯದಲ್ಲ ಇನ್ಸಪೆಕ್ಟರಸಾಬ, ಅದು ಮರ್ಕ್ಯುರಿ ಕೋಟಿಂ ಗಿನದು ರೋಲ್ಡಗೋಲ್ಡ ರಿಮ್ಮಿನದು.'

"ಹೀಗೋ ಇಷ್ಟರಿಂದಲೇ ಕೊಲೆ ಅವನನ್ನೂ ದ್ವೇಷಿ ಎನ್ನಬೇಕು?"

"ಅವನ ಮೀಸೆಗಡ್ಡಗಳು ಕೃತಕವೆಂದು ಕಂಡು ಬಂದಿತು,"

'ಹೇಗೆ'

'ಅವನು ಒಳಗೆ ಬಂದು ನೀವು ಕುಳಿತ ಕುರ್ಚಿಯಲ್ಲಿಯೇ ಕುಳಿತು ಬೆವರನ್ನೊರೆಸಿಕೊಳ್ಳುತ್ತಿದ್ದನು. ಆದರೆ ಆತನು ಗಡ್ಡಮೀಸೆಗಳಿಗೆ ಕರವಸ್ತ್ರ ತಾಗದಂತೆ ಜಾಗೃತೆವಹಿಸಿದ್ದನು.'

'ನ ತ್ತೆ ಏನು ಹೇಳಬಯಸುತ್ತೀರಿ ?'

'ಅವನು ಚಿರೂಟವನ್ನು ಸದಾಬಾಯೊಳಗಿಟ್ಟುಕೊಂಡಿರುವ ಉದ್ದೇ ಶವೆಂದರೆ ತನ್ನ ಧ್ವನಿಯ ಗುರುತನ್ನು ತಪ್ಪಿಸಲು ಎಂದು ನನ್ನಯೋಚನೆ

'ಇರಲಿ. ಅವನು ನಕಲಿ ಆಗಿದ್ದರೆ ಯಾರ ನಕಲು.'

"ಯಾರ ನಕಲೆಂದರೇನು ಇನ್ಸಪೆಕ್ಟರಸಾಬ ? ರಣಜಿತಲಾಲರ

ಗೆಳೆಯರ ನಕಲು "

. " ಹೀಗೇ, ರಣಜಿತಲಾಲರಿಗೆ ಭೆಟ್ಟಿಯಾಗಬೇಕು. ಎಂದು ಅಲ್ಲಿಂದ ಎದ್ದರು ತಲೆಬಾಗಿಲಿಗೆ ಹೊಗುತ್ತ ಮಿಸ್‌ಸೋಫಿಯಾಳನ್ನು ಅಭಿನಂದಿಸುತ್ತ

' ಥ್ಯಾಂಕ್ಸ್ ಮಿಸ್‌ಸೋಫಿಯಾ ನೀವು ಇನ್ನೊಂದು ಬೆಳಗಾಗುವದರಲ್ಲಿ ಮುಕ್ತರಾಗುತ್ತಿರಿ. ಗಿಳಿ ಪಂಜರದಲ್ಲಿಯೇ ಇದೆ." ಎಂದರು

ಹೊರಗೆ ಜೀಪಿನ ಹತ್ತರ ಹೋಗಿ ಬಂದು 'ಕ್ಷಮಿಸಿರಿ ಮಿಸ್ಟರ ನಿಮ್ಮನ್ನು ಒಬ್ಬರನ್ನೇ ಕೂಡ್ರಿಸಿ ನಾನು ಬಹಳ ಹೊತ್ತು ಒಳಗೆ ಕುಳಿತುಬಿಟ್ಟೆ. ಹೋಗೋಣ ನಡೆಯಿರಿ.' ಎಂದು ಜೀಪ ತೆಗೆದುಕೊಂಡು ಹೊರಟರು.

ಮರಳಿ ಕಚೇರಿಯ ಕಡೆಗೆ ಹೋಗುವಾಗ ಇನ್ಸಪೆಕ್ಟರ ಸಿಂಗರು ಚಂದ್ರಮೋಹನ ರಾಯನನ್ನುದ್ದೇಶಿಸಿ. " ಈ ದಿನ ಏನಾದರೂ ಮಾಡೋಣ ರಾಯ್. ನೀವೂ ಊಟಮಾಡಿಕೊಂಡು ಬನ್ನಿರಿ. ನಾನು ಈಗ ಕಚೇರಿಗೆ ಹೋಗಿ, ನಂತರ ಮನೆ ಸೇರಿ ಊಟ ಮಾಡಿ ಬರುತ್ತೇನೆ. ನೀವು ನನಗೆ ಎಲ್ಲಿ ಸಿಗುತ್ತೀರಿ. ಹಾಗೂ ಎಷ್ಟೊತ್ತಿಗೆ.

' ನಾನೇನೂ ಈಗ ಎಂಟುಘಂಟೆಗೆ ಹೋಟೆಲ್ ತಲುಪಿ ಅರ್ಧಘಂಟೆ ಊಟ ಮುಗಿಸಿ ಆರಾಮಾಗುತ್ತೇನೆ. ನಂತರ ನೀವು ಹೇಳಿದಲ್ಲಿಗೆ ಬರುತ್ತೇನೆ.

' ನೀವು ಮನೆ ಮಾಡಿಲ್ಲವೇನು ಮಿಸ್ಟರ ರಾಯ್ '

" ಮುಂಬಯಿಯಲ್ಲಿ ಅಲ್ಪ ಪಗಾರದಿಂದ ಮನೆ ಮಾಡಿದರೆ ಸಂಬಳವನ್ನೆಲ್ಲ ಬಾಡಿಗೆ ಕೊಟ್ಟು ಉಪವಾಸವಿರಬೇಕಾದೀತು. ಅದಕ್ಕಿಂತ ಹೋಟಲ ಜೀವನವೇ ನೆಟ್ಟಗೆ ಅನಿಸುತ್ತದೆ ಈ ಕಾಲದಲ್ಲಿ. "

" ಯಾವ ಹೋಟಲಿನಲ್ಲಿರುತ್ತೀರಿ ?"

" ಮೆಜೆಸ್ಟಿಕ್ ಸಿನಿಮಾದ ಹತ್ತರ ಅದೇಯಲ್ಲ ಗಿರಗಾಂ ಲಾಜ. ಅಲ್ಲಿಯೇ ಇರುತ್ತಿದ್ದೇನೆ. "

' ಒಳ್ಳೇದು. ನಾನು ಹೊರಡುತ್ತೇನೆ. ನೀವು ಈ ಲೋಕಲ್‌ಬಸ್ಸು ಹತ್ತಿಕೊಂಡು ಹೋಗಿರಿ. ನಾನು ಬೇಗ ಕೆಲಸ ಮುಗಿಸಿಕೊಂಡು ಕಚೇರಿಗೆ ಬರುತ್ತೇನೆ. ನೀವು ಒಂಭತ್ತಕ್ಕೆ ಸರಿಯಾಗಿ ಬನ್ನಿರಿ.

' ಅಗಲಿ. ನಾನು ಈ ಗದ್ದಲವಿದ್ದ ಬಸ್ಸಿನಲ್ಲಿ ಹೋಗಲಾರೆ. ಟ್ಯಾಕ್ಸಿ ಮಾಡಿಕೊಂಡೇ ಹೋಗುತ್ತೇನೆ.' ಎಂದು ಹೇಳಿ ರಸ್ತೆಯ ಬದಿಗೆ ನಿಂತಿದ್ದ

ಡ್ರಾಯವ್ಹರನನ್ನು ಕೂಗಿ ' ಟ್ಯಾಕ್ಸಿ ತಕ್ಕೊಂಡು ಬಾ. ' ಎಂದು ಹೇಳಿದನು ಟ್ಯಾಕ್ಸಿಯು ಹೊರಟು ಹೋದೊಡನೆ ಅಲ್ಲಿಯೇ ಸಮೀಪದಲ್ಲಿದ್ದ ಪೋಲೀ ಸನಿಗೆ ಸೂಚನೆ ಕೊಟ್ಟು ' ಆ ಟ್ಯಾಕ್ಸಿಯಲ್ಲಿ ಕುಳಿತವನು ಎಲ್ಲಿ ಹೋ ಗುತ್ತಾನೆ.ಹಾಗೂ ಎಲ್ಲಿ ಇಳಿಯುತ್ತಾನೆ. 'ಎಂಬುದನ್ನು ನನಗೆಕಚೇರಿಗೆ ಬಂದು ತಿಳಿಸು. ಇನ್ನೊಂದು ಟ್ಯಾಕ್ಸಿಯಲ್ಲಿ ಹೋಗು ' ಎಂದು ಅಜ್ಞೆಯಿತ್ತರು ಪೋಲೀಸನು ಗಡಿಬಿಡಿಯಿಂದಲೇಹೋರಟುಟ್ಯಾಕ್ಸಿಯನ್ನು ಹಿಂಬಾಲಿಸಿದನು

ಅರ್ಧ ಘಂಟೆಯಲ್ಲಿ ಪೋಲೀಸನು ವಾಪಸು ಬಂದು ' ಟ್ಯಾಕ್ಸಿಯು ಗಿರಗಾಂನಲ್ಲಿ ಮೆಜೆಸ್ಟಿಕ್ ಸಿನಿಮಾದ ಹತ್ತರ ಇದ್ದ ಗಿರಗಾಂ ಲಾಜಕ್ಕೆ ನಿಂತಿತೆಂದೂ ನಂತರ ಟ್ಯಾಕ್ಸಿಯು ಖಾಲಿಯಾಗಿಯೇ ಹೊರಳಿತು. ಎಂದು ವರದಿ ಮಾಡಿದನು.

' ಠೀಕ್. ನೀನಿನ್ನು ಹೋಗು ' ಎಂದು ಅವನನ್ನು ಕಳಿಸಿದರು ಸಿಂಗ'

ನಂತರ ಜವಾನನ್ನು ಕರೆದು ಸ್ಟ್ರಾಂಗ ಟೀ ತರಲಿಕ್ಕೆ ಹೇಳಿದರು. ಬಿಸಿಬಿಸಿ ಚಹ ಗಂಟಲಿನಲ್ಲಿ ಸುರಿದುಕೊಂಡ ಮೇಲೆ ಪೋಲೀಸರಿಬ್ಬರ ನ್ನು ಕರೆದುಕೊಂಡು ಜೀಪಿನಲ್ಲಿ ಕುಳಿತು ಹೊರಟರು ಗಿರಗಾಂಗೆ.

## (೧೮)

ಗಿರಗಾಂ ಲಾಜಿನ ಬಳಿಗೆ ಸ್ವಲ್ಪ ದೂರದಲ್ಲಿ ಜೀಪನ್ನು ನಿಲ್ಲಿಸಿ, ಪೋ ಲೀಸರಿಗೆ ಅಲ್ಲಿಯೇ ಇರಲಿಕ್ಕೆ ಹೇಳಿ. ಹೋಟಲಿನಲ್ಲಿ ಪ್ರವೇಶಿಸಿದರು. ಮ್ಯಾನೇಜರ ಕೌಂಟರಿನಲ್ಲಿಂದಲೇ ಎದ್ದು ಸಲಾಂ ಮಾಡಿದ.

' ನೀವೇ ಏನು ಮ್ಯಾನೇಜರ? ಎಂದು ಸಿಂಗ ಕೇಳಿದರು. '

' ಅಹುದು ರಾವಸಾಬ. '

' ಇಲ್ಲಿ ಚಂದ್ರ ಮೋಹನರಾಯ್ ಇರುತ್ತಿದ್ದಾರೆಯೆ ?'

" ಅಂದರೆ ಯಾರು ರಾವಸಾಬ. "

' ಸೇಪರಿನವರು '

' ಓ ಅವರೇ ಸಿ. ಎಂ. ರಾಯ್ ಇದ್ದಾರೆ. ಊಟಕ್ಕೆ ಕುಳಿತಿದ್ದಾರೆ. ಕರೆಸಲೇ ?

' ಬೇಡ ಬೇಡ ಸ್ವಲ್ಪ ನಿಮ್ಮ ಪ್ಯಾಸೆಂಜರ ರಜಿಸ್ಟರ ಕೊಡಿರಿ ಇಲ್ಲಿ '

ಮ್ಯಾನೇಜರರು ಡ್ರಾಅರದೊಳಗಿನ ರಜಿಸ್ಟರ ತೆಗೆದುಕೊಟ್ಟನು. ಸಿಂಗ ಒಂದೊಂದೆ ಪುಟ ತಿರುವುತ್ತ ರೂಮ್ ನಂ ೪ ಸಿ. ಎಮ್. ರಾಯ್ ಎಂದು ಬರೆದದ್ದನ್ನು ಓದಿದರು. ಹಾಗೂ ದಾಕಲ್ ತಾರೀಖು ದಿವಸಗಳನ್ನು ಟಿಪ್ಪಣಿ ಮಾಡಿಕೊಂಡರು. ನಂತರ ' ಇದು ತೆಗೆದುಕೊಳ್ಳಿರಿ. ನಿಮ್ಮ ರಜಿಸ್ಟರು ' ಎಂದು ಮ್ಯಾನೇಜರರಿಗೆ ವಾಪಸ ಕೊಟ್ಟರು ಹಾಗೂ " ನಿಮ್ಮ ದೈನಿಕ ಹಾಲ ಸ್ವಲ್ಪ ತೋರಿಸುತ್ತಿರಾ ?" ಎಂದು ಅವರಿಗೆ ಕೇಳಿದರು.

' ಓಹೋ ಆಗಲಿ ನಡೆಯಿರಿ. ' ಎಂದು ಅವರನ್ನು ಕರಕೊಂಡು ಒಳಗೆ ಹೋದನು. ಅಲ್ಲಿ ಸಿ. ಎಮ್. ರಾಯ್ ಊಟ ಮಾಡುತ್ತಿದ್ದನು.

' ಹಲೋ ಮಿಸ್ಟರ ರಾಯ್ !' ಎಂದು ಸಿಂಗ ನಗುತ್ತ ನುಡಿದರು.

' ಓ ಇನ್ಸಪೆಕ್ಟರಸಾಬ. ಬನ್ನಿರಿ. ಏಕೆ ಮನೆಗೆ ಹೋಗಲಿಲ್ಲವೇನು? ಇಷ್ಟು ಬೇಗ ಬಂದು ಬಿಟ್ಟಿರಿ ?' ಎಂದು ಕೇಳಿದನು.

' ಇಲ್ಲ ಈರಾತ್ರಿಯ ಪ್ರೋಗ್ರಾಂ ಕ್ಯಾನ್ಸಲ್ ಮಾಡಬೇಕಾಯಿತು. ಅದಕ್ಕೇ ನಿಮಗೆ ಹೇಳಿ ಹೋಗೋಣ ಎಂದು ಬಂದೆ '

' ಯಾಕೆ ಕ್ಯಾನ್ಸಲ್ ಆಯಿತು ಸಾಹೇಬರೇ ?

ಊಟ ಮುಗಿಸಿರಿ ನಿಮಗೆ ಕೆಲವು ಸಲಹೆ ಕೊಟ್ಟು ನಾನು ಮನೆ ಸೇರುತ್ತೇನೆ. ' ಎಂದು ಹೊರಗೆ ಬಂದು ಕೌಂಟರಿನ ಹತ್ತರ ಕುಳಿತರು. '

ಹತ್ತು ನಿಮಿಷಗಳನಂತರ ಸಿ. ಎಮ್. ರಾಯ್ ಊಟ ಮುಗಿಸಿಕೊಂಡು ಹೊರಗೆ ಬಂದನು. ಮೇಲೆ ನಮ್ಮ ರೂಮಿಗೆ ಹೋಗೋಣವೇ ? ಎಂದು ಕೇಳಿದನು. ಅದಕ್ಕೆ ಸಿಂಗರು ' ಆಗಲಿ ' ಎಂದು ಅವರೊಡನೆ ರೂಮಿಗೆ ತೆರಳಿದರು. ರಾಯ್ ಸೋಫಾದ ಮೇಲೆ ಕುಳಿತನು. ಸಿಂಗ ಮೇಜಿನ ಎದುರುಗಿನ ಖುರ್ಚಿಯಲ್ಲಿ ಕುಳಿತು ಕನ್ನಡಿಯಲ್ಲಿ ಮುಖ ನೋಡಿಕೊಂಡು ಕ್ರಾಪು ತೀಡಿಕೊಂಡರು.

' ಏನು ಸಲಹೇ ಕೊಡಬೇಕಾಗಿದ್ದಿತು ಸಾಹೇಬರೆ ? ಎಂದು ರಾಯ್

‘ ಏನಿಲ್ಲ ಇಬ್ಬರೂ ಕೂಡಿ ಗುಪ್ತ ಆಲೋಚನೆ ಮಾಡೋಣವೆಂದಿದೆ ಈ ಹೊಟೆಲಿನಲ್ಲಿ ಗದ್ದಲ ಸ್ವಲ್ಪ ಹೆಚ್ಚಿದೆ. ನಾಳೆಗೆ ಭೆಟ್ಟಿಯಾಗೋಣ ಮುಂಜಾನೆ ಹತ್ತು ಘಂಟೆಗೆ ಕಚೇರಿಗೆ ಬಂದು ಬಿಡಿರಿ. ಎಂದು ಎದ್ದು ಹೊರಟರು. ಸಿ. ಎಮ್ ರಾಯ್ ಅವರನ್ನು ಬಿಳ್ಕೊಡಲು ಹೋಟೆಲಿನ ಹೊರಗೂ ಬಂದನು. ಅವನು ಬಂದೊಡನೆ ಸಿಂಗ ಅವನ ಹೆಗಲ ಮೇಲೆ ಕೈ ಹಾಕಿ ‘ ಮಿಸ್ಟರ ರಾಯ್ ಇನ್ನು ಹನ್ನೆರಡು ಘಂಟೆಯೊಳಗಾಗಿ ಇಬ್ಬರೂ ಈ ಕೆಲಸ ಮುಗಿಸಿ ಬಿಡೋಣ ’ ಎಂದವರೇ ಅವನ ಕೈಗೆ ಬೇಡಿ ಹಾಕಿದರು.

ಚಂದ್ರಮೋಹನರಾಯ್ ಒಮ್ಮೆಲೆ ಸಿಡಿಲುಬಡಿದವನಂತೆ ದಂಗಾದನು ಸಿಂಗರನ್ನು ಹಿಂಬಾಲಿಸಿ ಜೀಪನ್ನು ಹತ್ತಿದನು. ಜೀಪು ರೇಸಿನ ಕುದುರೆಯಂತೆ ನಿರಂತರ ಹಾರ್ನು ಬಾರಿಸುತ್ತ ಪೋಲೀಸ ಕಚೇರಿಗೆ ಓಡಿತು.

ಕಚೇರಿಗೆ ಬಂದೊಡನೆಯೇ ಪೋಲೀಸ ಕಾನ್ಸಟೇಬಲುಗಳು ಚಂದ್ರಮೋಹನರಾಯನನ್ನು ಒಳಗೆ ಕರೆದುಕೊಂಡು ಹೋಗಿ ಸಿಂಗರ ಎದುರಿಗಿದ್ದ ಕುರ್ಚಿಯಲ್ಲಿ ಕುಳ್ಳಿರಿಸಿ ತಾವು ದೂರಸರಿದು ನಿಂತರು. ಸಿಂಗ, ಅವರಿಗೆ ಹೊರಗೆ ಹೋಗಿ ಬಿಡಲು ತಿಳಿಸಿದರು.

“ ಮಿಸ್ಟರ ರಾಯ್, ನೀವಿನ್ನು ಪಾರಾಗಲಾರಿರಿ. ”

“ ಏಕೆ ?”

“ ನೀವು ಚಮನಲಾಲರಿರುವದರಿಂದ; ’

“ .

“ ಮೌನದ ಅರ್ಥವೇನು ಚಮನಲಾಲ ?”

“ ಅದರರ್ಥವಿಷ್ಟೇ. ಯಾರೋ ನಿಮಗೆ ಮೋಸಮಾಡಿದ್ದಾರೆ ಅಥವಾ ತಪ್ಪು ಕಲ್ಪನೆ ತಂದುಕೊಟ್ಟಿದ್ದಾರೆ. ನೀವು ತಪ್ಪು ವ್ಯಕ್ತಿಯನ್ನು ಬಂಧಿಸಿದ್ದೀರಿ

‘ ಇಲ್ಲ ಚಮನಲಾಲ. ನೀವೇ ಮೋಸ ಹೋಗಿದ್ದೀರಿ. ಇತರರನ್ನೂ ಮೋಸಗೊಳಿಸಿಲೆತ್ನಿಸಿದ್ದೀರಿ ನಾನು ಕೊಲೆಪಾತಿಕೆಯನ್ನೇ ಈಗ ಬೇಡಿ ಹಾಕಿಕೊಂಡು ತಂದಿದ್ದೇನೆ. ಇದನ್ನು ನೀವು ಒಪ್ಪದೆ ವಿಧಿಯಿಲ್ಲ. ”

‘ ಇನ್ಸಪೆಕ್ಟರಸಾಬ. ನಾನು ನಿಮ್ಮೆದುರಿಗೆ ಎಷ್ಟೋಸಲ ಹಾಯ್ದು ಹೋಗಿದ್ದೇನೆ ಎಷ್ಟು ಘಂಟೆಗಳವರೆಗೆ ಮಾತನಾಡಿದ್ದೇನೆ ಇಬ್ಬರೂ ಒಂದೇ ಜೀಪಿನಲ್ಲಿ ಅಡ್ಡಾಡಿದ್ದೇವೆ ಆಗ ನಿಮ್ಮ ಸಂಶಯದೃಷ್ಟಿ ನನ್ನ ಮೇಲೆ ಏಕಿರಲಿಲ್ಲ. !”

" ಏಕಿರಲಿಲ್ಲವೆಂದರೆ, ಹುಲಿಯ ಚರ್ಮ ಹೊದೆದುಕೊಂಡು ಕತ್ತೆಯು ನಿಜಸ್ವರೂಪವು ಅದು ಕಿರಚಿನಾಗಲೇ ಗೊತ್ತಾಗುವದಿಲ್ಲವೇ? ಈಗ ಕೂಡ ಹಾಗೆಯೇ ಇದೆ ಪರಸ್ಥಿತಿ.

"ನಿಮ್ಮ ಕಣ್ಣಿನಲ್ಲಿ ನಾನೇ ಕೊಲೆಪಾತಕಿಯೆಂದು ಹೇಳುತ್ತಿದ್ದಿರೇನು?

" ನಿಶ್ಚವಾಗಿಯೂ ನೀವು ಮಿಸ್‌ಮಾಲಾಳ ಸ್ನೇಹಬಯಸಿದ್ದಿರಲ್ಲವೇ? ಅವಳು ತಿರಸ್ಕರಿಸುವದು ನಿಮಗೆ ಗೊತ್ತಾಗಲಿಲ್ಲವೆ? ಇಲ್ಲವೆ ಸೇಡಿನಬುದ್ಧಿಯಿಂದ ಹಗ್ಗವನ್ನು ಸಡಿಲುಬಿಟ್ಟಿರಲ್ಲವೇ? ಆ ಹಗ್ಗವೇ ನಾಳೆ ನಿಮ್ಮನು ಗಲ್ಲಿಗೇರಿಸುವದು, ಆದಿತ್ಯವಾರ ಮುಂಜಾನೆ ರಾಯಲ್ ಓಪೇರಾಕ್ಕೆ ನಿಮ್ಮ ಸ್ನೇಹಿತ ರಣಜಿತಲಾಲ ಸಂಗಡ ನಾಟಕ ನೋಡಲಿಕ್ಕೆ ಹೋಗಿದ್ದಿರಲ್ಲವೇ? ಇಂಟರಬೆಲ್ ಆದೊಡನೆ ಹೊರಗೆ ಸಿಗರೇಟು ಸೇದಲು ಬಂದಾಗ ವ್ಹಿಟಗೆ ಹೋಗಿ ಬರುತ್ತೇನೆಂದು ಕಾರು ತೆಗೆದುಕೊಂಡು ಹೋದಿರೆಲ್ಲಿಗೆ? ವ್ಹಿಟಗಲ್ಲ ಮರೀನ್ ಡ್ರಾಯವಿಗೆ, ಮಿಸ್‌ಮಾಲಾಳು ಒಬ್ಬಳೇ ಇದ್ದಾಗ ಜಿನ್ ಕುಡಿದ? ಅವಳನ್ನು ಹಲ್ಲೆಮಾಡಿ ಶವವನ್ನು ಸೋಫಾದ ಹಿಂದೆ ನೆರಳಿಗೆ ಹಾಕಿ, ಫ್ಲಾವರಪಾಟಿನಲ್ಲಿದ್ದ ಎರಡು ಹೂಗಳನ್ನು ನಿಮ್ಮ ಕಾರು ನಿಂತ ಜಾಗೆಯಲ್ಲಿ ಬೀಸಿದಿರಲ್ಲವೇ? ನೀವು ಪುನಃ ಥಿಯೇಟರಿಗೆ ಬಂದು ಕುಳಿತಾಗ ಕೊನೆಯ ಅಂಕು ನಡೆದಿದ್ದು ನಿಜವಲ್ಲವೇ ಆಗ ನಿಮ್ಮ ಮುಖ ಭಾವ ಹೆಗಿದ್ದಿತು. ಹಣೆಯ ಮೇಲೆ ಬೆವರಿನ ಸಾಲ ದಟ್ಟೆದ್ದಿತು. ನೀವು ಥಿಯೇರಿನಲ್ಲಿ ಸೀಟಿನಲ್ಲಿ ಕುಳಿತಾಗಲೇ ಮುಖವನ್ನೊರಿಸಿಕೊಂಡಿರಿ, ನಂತರ ನೆರವಾಗಿ ಮನೆಗೆ ಹೋಗಿ ನಿಮ್ಮ ಅಣ್ಣಾ ಮನಹರಲಾಲರ ಸಂಗಡ ವಾದಿಸಿದಿರಿ. ಕಲ್ಕತ್ತೆಗೆಂದು ಟ್ಯಾಕ್ಸಿ ಮಾಡಿಕೊಂಡು ಹೋದಿರಿ. ಎಲ್ಲಿಗೆ ? ವಿಮಾನ ನಿಲ್ದಾಣಕ್ಕಲ್ಲ, ಗಿರಿಗಾಂ ಲಾಜಿಗೆ, ನಿಮ್ಮಲ್ಲಿ ಭಯ ಪೋಲೀಸರ ಕಾವಲ ಎಲ್ಲವೂ ನಿಶ್ಚಯವಾಗಿ ಅರಿತಿದ್ದಾರೆ. ಅದಕ್ಕಂದೇ ಪ್ರತಿತಾಸಿಗೆ ಪ್ರವಾಹವವು ಯಾವ ಕಡೆಗೆ ಹರಿಯುತ್ತಿದೆಯೆಂದು ನೋಡಲು ನೀವು ವೇಷ ಬದಲಾಯಿಸಿದಿರಿ, ಚಮನಲಾಲ ಹೋಗಿ ಚಂದ್ರ ಮೋನಹರಾಯ್ ಆದಿರಿ. ಗಿರಿಗಾಂ ಲಾಜಿನ ನಾಲ್ಕನೇ ನಂಬರಿನ ರೂಮಿನಲ್ಲಿ ಸಿ. ಎಮ್. ರಾಯ್ ಪೇಪರ ವ್ಯವಸಾಯ ಎಂದು ಹೆಸರು ದಾಕಲ್ ಮಾಡಿದಿರಿ. ನಮಗೆ ಸುಳ್ಳು ವ್ಹಿಜಿಟಿಂಗ ಕಾರ್ಡು ಕೊಟ್ಟಿರಿ. ಹಾಗೆಯೇ ನನ್ನಿಂದ ನಿಮಗೆ ಯಾವ ಮಾಹಿತಿಯ ಅಂಶವೂ ತಿಳಿಯದೆ ಹೋದದ್ದರಿಂದ ನೀವು

ಮತ್ತೊಮ್ಮೆ ಶ್ರೀ-ನಿವಾಸಕ್ಕೆ ಮೂರನೆ ದಿನ ಬೆಳಗಿನಲ್ಲಿ ಹತ್ತು ಘಂಟೆಗೆ ಮೋಟರ ಸೈಕಲ್ ಮೇಲೆ ಕುಳಿತು. ಪ್ರಿಟೆಂಡ್ ಬ್ರುಶ್‌ಶರ್ಟ ಹಾಕಿ ಕೊಂಡು, ತಂಪಿನ ಕನ್ನಡಕ ಏರಿಸಿ, ದಪ್ಪ ಚಿರೂಟನ್ನು ಬಾಯಲ್ಲಿ ಕಚ್ಚಿ ಕೊಂಡು ಹೋಗಿ ಬೆಟ್ಟಿ ಪಡೆದಿರಲ್ಲವೇ ಮಿಸ್ ಸೋಫಿಯಾಳಿಂದ ? ಈ ಎರೆಲ್‌ಫ್ಲಿನ ಮೀಸೆ ಗಡ್ಡವು ನಿಮ್ಮವಲ್ಲ. ' ಎಂದವರೇ ಗಡ್ಡ ಹಿಡಿದು ಎ ಳೆದು ಬಿಟ್ಟರು. ಕೈಗೆ ಂಟಿ ಗಡ್ಡವು ಕಿತ್ತುಬಂದಿತು. ಚಮನಲಾಲ ಒಮ್ಮೆ ಲೆ ಮೀಸೆಯನ್ನು ಮುಚ್ಚಿಕೊಂಡನು. ಆದರೆ ಸಿಂಗ ಅವುಗಳನ್ನೂ ಕೂಡ ವಶಪಡಿಸಿಕೊಂಡರು. ನಂತರ ' ನೀವು ಮಿಸ್ ಮಾಲಾಳನ್ನು ಕೊ ಲ್ಲುವ ಉದ್ದೇಶವೇನಿತ್ತು ಹೇಳಬಲ್ಲಿರಾ ? ಎಂದು ಪ್ರಶ್ನಿಸಿದರು.

ಚಮನಲಾಲ ಎದುರಿಗಿದ್ದ ಗೋಡೆಯನ್ನೊಮ್ಮೆ ತೀಕ್ಷ್ಣದೃಷ್ಟಿಯಿಂದ ನೋಡಿದನು. " ಓಹೋ ಈಗಾಗಲೇ ಡಿಕ್ಟಾಫೋನಿನ ವ್ಯವಸ್ಥೆಯನ್ನೂ ಮಾಡಿ ಬಿಟ್ಟಿದ್ದೀರಿ ನಿಜ. ನಾನೇ ಚಮನಲಾಲ. ನಾನು ತಾತ್ಪೂರ್ತಿಕರ ಅಥವಾ ನಕಲಿ ಚಂದ್ರಮೋಹನರಾಯ್ ಆಗಿದ್ದೆ ನಾನು ರಿಜ್‌ನಲ್ಲಿ ಹೋದಾಗ ಮಿಸ್‌ಮಾಲಾಳ ನೃತ್ಯಕ್ಕೆ-ರೂಪಕ್ಕೆ ಮನಸೋತು ಮೋಹಿತ ನಾದೆ. ಅವಳ ಸಖ್ಯವನ್ನು ಬಯಸಿದೆ. ಅವಳಿಗಾಗಿ ಎಷ್ಟು ಹಣವನ್ನಾದರೂ ವೆಚ್ಚಮಾಡಲು ಸಿದ್ಧನಿದ್ದೆ. ಅದಕ್ಕೆ ಅನುಕೂಲ ವೆಂದರೆ ನನಗೆ ಡರ್ಬಿಲಾ ಟ್ರಿಯಲ್ಲಿ ಅರ್ಧ ಲಕ್ಷದಷ್ಟು ಬಹುಮಾನ ಬಂದಿತ್ತು ನಾನು ಮಯೂರ ಪಂಖಿಳ ಫ್ಯಾಶನ್ ಪರೇಡಿನ ವೆಚ್ಚವಹಿಸಿದೆ. ಆದರೂ ಇನ್ನು ಉದ್ದೇಶ ಸಫಲಿಸಲಿಲ್ಲ. ಅಷ್ಟೇ ಅಲ್ಲದೆ ನನಗೆ ವಿರುದ್ಧವಾಗಿ ಅವಳು ತಿರಸ್ಕರಿಸುವ ಅಪಮಾನಕಾರಕನಗ ಬೀರಿದಳು ನನ್ನ ಕೋಪ ಪ್ರಜ್ವಲಿಸಿತು. ಮನೆಗೆ ಹೋದವನೇ ಇಡೀ ರಾತ್ರಿ ವಿಚಾರ ಮಾಡಿಯೇ ಮಾಡಿದೆ. ನಿದ್ರೆ ಯಾ ವಾಗಹತ್ತಿತೋ ಗೊತ್ತಾಗಲಿಲ್ಲ. ಮುಂಜಾನೆ ರಣಜಿತ್‌ನಿಂದ ಫೋನ ಬಂ ದಾಗಲೇ ಎದ್ದೆ. ಆ ಫೋನ ಸಂದೇಶವು ನನ್ನ ಪೂರ್ವಕಲ್ಪಿತ ಕಾರ್ಯ ಕ್ರಮಕ್ಕೆ ಭಂಗತರ ಬಹುದೆಂದೆನಿಸಿತು. ಆದರೂ ನೋಡೋಣವೆಂದು ಒಂ ದು ಚೂರಿಯನ್ನು ಜೇಬಿಗೆ ಹಾಕಿಕೊಂಡೇ ಹೋದೆ. ಅದು ಲಾಜಿನಲ್ಲಿ ಅವ ನಾಟಕದ ಇಂಟರಬೆಲ್ ಆದೊಡನೆ ನೆವ ಹೇಳಿ ಥಿಯೇಟರಿನಿಂದ ಪಾರಾದೆ. ನೇರವಾಗಿ "ಶ್ರೀನಿವಾಸ"ಕ್ಕೆ ಹೋದೆ. ಅಲ್ಲಿ ಬಾಗಿಲಿನಲ್ಲಿಯೇ ಅವಳು ನಿಂತಿದ್ದಳು, ನನಗೆ ಸ್ವಾಗತ ನೀಡಲಿಲ್ಲ.

ನಾನು ಕಾರು ನಿಲ್ಲಿಸಿ ಸಿಟ್ಟಿನಿಂದ ಜಿನ್ ಬಾಟ್ಲಿಯ ಕ್ಯಾಪ್ ಒಡೆದು ಎಡಗೈಯಿಂದ ಹಿಡಿದು ಸ್ವಲ್ಪ ಕುಡಿದು " ಹಲೋ ಡಿಯರ್ " ಎಂದು ಕೂಗಿದೆ ಅದಕ್ಕೆ ಅವಳು ಒಮ್ಮೆಲೆ

" ಏ ಹಳ್ಳಿಹುಂಬ, ಹೋಗು ಇಲ್ಲಿಂದ " ಎಂದು ಕೈತೋರಿಸಿದಳು. ನನ್ನ ತಲೆ ಕಾಯ್ದು ಹೋಯಿತು. ಚೂರಿಯನ್ನು ತೆಗೆದು ಅವಳನ್ನು ಗಾಯಪಡಿಸಿದೆ. ಹಾಗೂ ಶವವನ್ನು ಒಳಗೆ ಸೋಫಾದಹಿಂದೆ ಎಳೆದು ಹಾಕಿ ಹೊರಗೆ ಬರುವಷ್ಟರಲ್ಲಿ ಫ್ಲಾವರಪಾಟಿನೊಳಗೆ ಎರಡು ಸುಂದರ ಹೂಗಳು ಕಂಡವು ಅವನ್ನು ವಾಸನೆ ನೋಡಿದೆ. ವಾಸನೆ ಬರಲಿಲ್ಲ ಹೊರಗೆ ಬಂದು ಅವನ್ನು ಎಸೆದು ಬಿಟ್ಟೆ. ನಿಜ. ನಿಜ. ನಾನೇ ಅವಳನ್ನು ಕೊಂದಿದ್ದೇನೆ. ನೀರು, ನೀರು, " ಎಂದು ಕುಳಿತಲ್ಲಿಯೇ ಕೈಗಳಿಂದ ಕಣ್ಣು ಮುಚ್ಚಿಕೊಂಡನು ಸಿಂಗರು ಜವಾನನನ್ನು ಕರೆಯಿಸಿ ನೀರನ್ನು ತರಿಸಿದರು.

ನಂತರ ನೀಳವಾದ ಉಸಿರನ್ನು ಬಿಡುತ್ತ ಚಮನಲಾಲ ಕುಳಿತನು ಸಿಂಗರು.

" ಇರಲಿ ಆ ಸ್ಯಾಂಡಲ್ ಎಲ್ಲಿ ಹೋಯಿತು ?"

" ನಾನೇ ತೆಗೆದುಕೊಂಡಿದ್ದೇನೆ. ಅದು ಕೂಡ ಲಾಜನಲ್ಲಿದೆ. "

" ನೀವು ಚಂದ್ರಮೋಹನರಾಯ್ ಎಂದೇಕೆ ನಮಗೆ ಮೋಸ ಪಡಿಸಿದಿರಿ ?"

" ನಾನೂ ಕೊಲೆ ಮಾಡಿದೊಡನೆಯೇ ದೂರ ಹೋಗಿ ಬಿಡಬಹುದೆಂದು ತಿಳಿದಿದ್ದೆ. ಆದರೆ ನನ್ನ ಬಂಧನದ ಸಲುವಾಗಿ ಎಲ್ಲ ಕಡೆಗೂ ಸಾಯಂಕಾಲದ ಹೊತ್ತಿಗೆ ಬಿನ್ ಡ್ರೆಸಿನಲ್ಲಿಯ ಪೋಲೀಸರು ಸಿದ್ಧರಿರುತ್ತಾರೆಂದು ಊಹಿಸಿದೆ. ಅದಕ್ಕಾಗಿ ನಾನು ಗಿರಗಾಂವಕ್ಕೆ ಬಂದೆ ಇನ್ನೊಂದು ಕಾರಣವೆಂದರೆ ನನಗೆ ನನ್ನ ಬಗ್ಗೆಯೇ ಪ್ರತಿದಿನ ತನಿಖೆತಿಳಿದುಕೊಳ್ಳಬೇಕೆಂಬ ಅದರಂತೆಯೇ ನಾನು ಬೇರೆಬೇರೆ ದಾರಿಯಲ್ಲಿ ಜಾರಬೇಕೆಂದು ಕಾರಣದಿಂದಲೇ ರಣಜಿತ ಇಲ್ಲದಾಗ ಅವನ ಮೇಜಿನ ವ್ಹಿಜಿಟಿಂಗ ಕಾರ್ಡು ತೆಗೆದುಕೊಂಡು ಬಂದೆ, ನನ್ನ ಮುಖ ಗುರುತೀಸ ಬಾರದೆಂದು ಮೀಸೆ ಗಡ್ಡ ಹಚ್ಚಿಕೊಂಡೆ ಸೋಫಿಯಾಳೊಂದಿಗೆ ಮಾತನಾಡುವಾಗ ಕೂಡ ದನಿಯ ಗುರುತು ಸಿಗಲಾರದೆಂದು ಚಿರೂಟನ್ನು ಹಲ್ಲಿನಲ್ಲಿ ಕಚ್ಚಿಕೊಂಡೇ ಮಾತನಾಡಿದೆ. ಹಾಗೂ ಹೆಚ್ಚು ಹೊತ್ತೂ ಕೂಡಾ ನಿಲ್ಲಲಿಲ್ಲ. ಅಲ್ಲಿ ಅವಳಿಂದಲೇ ನಿಮಗೆ

ಎಲ್ಲರು ಗೋತ್ತಾಗಿರಬೇಕು. ಇದೋ ನನ್ನ ಕೈಗಳು ನಿಮ್ಮ ಬೇಡಿಗ ... ನ್ನಾಗತಿಸುತ್ತಿವೆ. ನನ್ನ ಕೊರಳು ಕೂಡ ಹಗ್ಗಕ್ಕಾಗಿ ಹಾತೊರೆ ಯುತ್ತಿವೆ. ಇಲ್ಲಿಯವರೆಗೆ ನಿರಪರಾಧಿಗಳನ್ನು ಅನ್ಯಾಯದಿಂದ ಬಂಧಿ ಸಿದ್ದಾರೆ. ಅವರನ್ನು ಈಗಲೇ ಬಿಡುಗಡೆ ಮಾಡಿರಿ. ಇದೋ ನನ್ನ ರೂಮಿನ ಕೀಲಿಯ ಕೈ, ನಿಮಗೆ ಬೇಕಾದ ಸಾಕ್ಷ್ಯಗಳು ಅದರಲ್ಲಿರಿಸಿವೆ. ಈ ಮೋಹನಾಟಕದ ದುರಂತದೃಶ್ಯ ಬೇಗನೆ ಮುಕ್ತಾಯಗೊಳ್ಳಲಿ. ಎಂದು ಒಮ್ಮಲೇ ನಿಶ್ಚಲಭಾವದಿಂದ ಚಮನಲಾಲ ಎದ್ದುನಿಂತನು. ಅವನ ಮುಖದ ಮೇಲಿನ ಕಳೆಯು "ಸತ್ತಲೂ ಸ್ವರ್ಗದಲ್ಲಿಯಾದರೂ ನಿನ್ನ ಬಿಡಲಾರೆ.' ಎಂಬ ಸೇಡಿನ ಭಾವನೆಯನ್ನು ಸೂಚಿಸುತ್ತಿತು.

ಇನಸ್ಪೆಕ್ಟರರು ಬೆಲ್ ಬಾರಿಸಿ ಪೋಲೀಸ ಕಾನ್ಸಟೇಬಲ ನನ್ನು ಕರೆದು, ವಾರ್ಡರನನ್ನು ಕರೆಯಲು ಹೇಳಿದರು. ಅವನು ಬಂದ ಕೂಡಲೇ ಮಿಲಿಟರಿ ಸಲಾಂ ಕೊಟ್ಟು ನಿಂತ. ಇನ್ಸ್ಪೆಕ್ಟರ ಸಿಂಗ "ಇವನ ನ್ನು ಒಳಗೆ ಲಾಕಪ್ಪಿನಲ್ಲಿ ಇಡು" ಎಂದು ಆಜ್ಞಾಪಿಸಿದನು. ಅವನು ಚಮನಲಾಲನನ್ನು ಕರೆದುಕೊಂಡು ಹೊರಟುಹೋದನು. ಅವನು ಹೋಗಳಿ ತ್ತಿದುದನ್ನೇ ಗಮನಿಸುತ್ತ ಕುಳಿತಿದ್ದವರು ತಾನಾಗಿಯೇ ಶಿಕ್ಕುಬಿದ್ದು ಎಲ್ಲಿಗಾದರೂ ಹೋಗಿಬಿಟ್ಟಿದ್ದರೆ ಈ "ಪ್ರೋರಟ್ವೆಂಟಿ" ಯನ್ನು ಬಂಧಿಸುವದು ದುಸ್ತರವಾಗುತ್ತಿತ್ತು, ಎಂದು ನುಡಿದು ಸಮಾಧಾನದ ನಿಟ್ಟುಸಿರೊಂದನ್ನು ತಂದು ಮೇಜಿನ ಮೇಲೆ ಕಾಲುಗಳನ್ನು ಹಾಕಿ ಕೊಂಡು ಕುರ್ಚಿಯ ಬೆನ್ನಿಗೆ ತಲೆಯೊರಗಿಸಿದರು ಸಿಂಗ.

( ಮುಗಿದುದು. )

'ಅಬಿಂಡ್' ಪಿಡ್ನ ದ್ವೇಷಾಸೂಯೆಗಳ ಮೂಲಕ ಖಂಡಗಳಾಗಿ ಪರಿಣಮಿಸಿದ, ಎರಡು ರಾಜ್ಯಗಳ..........

# ಗಡಿರೇಖೆ.

ಆಕಾಶದಲ್ಲಿ ಇನ್ನೂ ಚಂದ್ರನುದಯಿಸಿದ್ದಿಲ್ಲ. ಗಡಿಯು ಕಂದಕದಲ್ಲಿ ಅಂಧಕಾರ ಮತ್ತು ನಿಃಶಬ್ದತೆಗಳು ಅಕ್ಕ-ತಂಗಿಯರಂತೆ ಒಬ್ಬರಿಗೊಬ್ಬರು ಅಪ್ಪಿಕೊಂಡು ಲೋಲಾಡುತ್ತಿದ್ದವು. ಮಗ್ಗಲಿನ ಪರ್ವತವು ತಲೆ ಬಗ್ಗಿಸಿ ನಿಂತಿದ್ದಿತು. ಅದರ ನಗ್ನ ವಕ್ಷಸ್ಥಳದಲ್ಲಿ ಸಾವಿರಾರು ವರುಷಗಳ ಇತಿಹಾಸದ ಉಲ್ಲೇಖವಿತ್ತು. — "ಯಾವನು ತನ್ನ ಖಡದಿಂದ ಎದುರಿಸಿದವರನ್ನು ತನ್ನ ಗುಲಾಮರನ್ನಾಗಿ ಮಾಡಿಕೊಂಡಿದ್ದನು? ಯಾವನ ಐಶ್ವರ್ಯವು ಕೊಳ್ಳೆಗಾರರ ಪಾಲಾಗಿದ್ದು, ಮತ್ತೆ ಕೆಲವರ ಹೆಂಡಿರು ಮಕ್ಕಳ ಪಾವಿತ್ರ್ಯವನ್ನು ಸೂರೆಗೊಂಡಿದ್ದು, ಮತ್ತು ವಿಜಯಶಾಲಿಯು ಪತಾಕೆಯನ್ನು ಹಾರಾಡಿಸುತ್ತ, ಹಾಡುತ್ತ ತಿರುಗಿ ಹೋಗಿದ್ದು ಆ ವೀರರ ಮತ್ತು ವಿಜಯಶಾಲಿಗಳ ಇತಿಹಾಸ" ಎಂದು ಪರ್ವತ ಖರದ ಮೇಲೆ ಸಂಣ ದೊಡ್ಡ ಗಿಡಗಂಟಿಗಳು ಇನ್ನೂ ಇರುತ್ತಿದ್ದು, ಅಲ್ಲಿ ಯಾತ್ರಿಕರ ತಂಗುವಿಕೆಯೂ, ಕೆಲವು ಕಡೆ ವ್ಯಾಪಾರಿಗಳ ಇಳಿದುಕೊಳ್ಳುವಿಕೆಯೂ ಮಾನವಾಗಿ ಸಾಗಿದ್ದುವು. ಮತ್ತು ಮನುಷ್ಯ-ಮನುಷ್ಯರ ವ್ಯಾಪಾರವಾಗಿ ಲಾಭವನ್ನೂ ಹಂಚಿಕೊಂಡಿದ್ದರು.

ದೇಶಗಳನ್ನು ಪ್ರತ್ಯೇಕಿಸುವ ಆ ಮೂರ್ತಿಯೂ ಮೂಕವಾಗಿ ನಿಂತಿತ್ತು. ಮತ್ತು ಅದರ ಎರಡೂ ಕಡೆಗೆ ಸಾ ಪಿಸಲ್ಪಟ್ಟ ಗುಡಿಸಲುಗಳಲ್ಲಿರುವ ಆ ಜನರು ಈ ಮೂರ್ತಿಯ ಸಂರಕ್ಷಕರಾಗಿದ್ದರು. ಆ ಗಡಿಗಳ ರಕ್ಷಕರಾಗಿದ್ದರು, ಜನರ ಶಾಂತಿ ಮತ್ತು ಸುರಕ್ಷತೆಯ ರಕ್ಷಕರಾಗಿದ್ದರು.

ಅತ್ತ ಕಡೆಯ ಗುಡಿಸಲಿನೊಳಗಿಂದ ಒಬ್ಬ ಸಿದ್ಧಾಂತಹೀನ ಮನುಷ್ಯನಂತೆ. ಹೊಗೆಯು ಉದಾಸೀ ಯಲ್ಲಿ ಹೊರಡುತ್ತಿತ್ತು ಎತು ಒಳಗೆ ಮಂದವಾದ ದೀಪವು ಉರಿಯುತ್ತಿತ್ತು. ಆದರೆ ಇತ್ತ ಕಡೆಯ

ಗುಡಿಸಲು ಗೋರಿಯಂತೆ ನಿಸ್ತಬ್ಧವಿದ್ದಿತು. ತರುಣ ಗುಡಿಸಲಿನ ಹೊರಗಡೆ ನೆಲದ ಮೇಲೆ ಕುಳಿತು ಆ ಬಿಳಿಯ ಮೂರ್ತಿಯ ಕಡೆಗೆ ನೋಡುತ್ತಿದ್ದ. ಅವನ ಕಣ್ಣುಗಳು ಕೆಂಡ ಕಾರುತ್ತಿದ್ದವು. ಕೈಗಳು ನಡುಗುತ್ತಿದ್ದವು. ಒಣಗಿದ ತುಟಿಗಳು ಅದರುತ್ತಿದ್ದವು. ಆಗಾಗ ಅವುಗಳ ಮೇಲೆ ನಾಲಿಗೆಯನ್ನೂ ಸವರುತ್ತಿದ್ದನವನು ಹತ್ತಿರವೇ ಅವನ "ಟೋಪಿ" ನೆಲದ ಮೇಲುರುಳಿತ್ತು. ಅದರಲ್ಲಿ ಅವನು ಮದ್ದು ಜಡಿದು ಗುಂಡು ತುಂಬಿದ್ದನು. ಅವನು ಒಂದು ಹುಚ್ಚು ನಾಯಿಯಂತೆ ಯಾರನ್ನೋ ಕಚ್ಚಲಿಚ್ಛಿಸುತ್ತಿದ್ದನು. ಅತ್ತ ಕಡೆಯ ರಕ್ಷಕನು ಇವನ ಅಪಮಾನ ಮಾಡಿದ್ದು ಅದು ಸಹಿಸಲಾರದುದಾಗಿತ್ತು.



ಮಾತುಗಳೇನೂ ನಡೆದಿದ್ದಿಲ್ಲ. ಆದರೆ ಇದು ಎರಡು ದೇಶಗಳ ರಾಜನೀತಿಯ ಪ್ರಶ್ನೆಯಾಗಿದ್ದಿತು. ಮತ್ತು ರಕ್ಷಕನು ಸುಮ್ಮನಿರುವಂತೆ ಇದಿದ್ದಿಲ್ಲ. ಆ ಪ್ರಶ್ನೆ ಜನರೆಲ್ಲ ಒಬ್ಬನಂತೆ ಆಗುತ್ತಾರೆ. ರಾಜನೀತಿಯು ಒಂದರಂತಾಗುತ್ತದೆ. ಆದರೆ ಜನರನ್ನಾಳುವದು, ನವಾಬ ಮತ್ತು ಮಹಾರಾಜ, ಜಹಗೀರದಾರ ಮತ್ತು ಬಂಡವಲದಾರ ಒಬ್ಬರಂತೊಬ್ಬರು ಆಗುವದಿಲ್ಲ. ಅವರ ರಾಜನೀತಿ ಬೇರೆ ಬೇರೆ ಆಗುತ್ತದೆ. ಅವರ ರಾಜ್ಯವಾಳುವ ರೀತಿ ಬೇರೆ ಬೇರೆ ಇರುತ್ತವೆ. ಅವರ ಇರುವಿಕೆಯು ಜನರಿಂದ ತೀರ ಭಿನ್ನವಾಗಿರುತ್ತವೆ. ನವಾಬನು ಯಾವ ನರ ಅನುಮತಿಯನ್ನು ತನ್ನ ರಾಜ್ಯದಲ್ಲಿ ಕೊಡುತ್ತಾನೆಯೋ ಅದಕ್ಕೆ ಮಹಾರಾಜನು ತನ್ನ ರಾಜ್ಯದಲ್ಲಿ ಪ್ರತಿಬಂಧಿಸುತ್ತಾನೆ. ಒಂದು ರಾಜ್ಯದ ಶಾಸಕನು ತನ್ನ ದೇಶದ ಸ್ತ್ರೀಗೆ ಎರಡನೇ ದೇಶದ ಪ್ರಜೆಯೊಂದಿಗೆ ಲಗ್ನವಾಗಲು ಪ್ರತಿಬಂಧಿಸಿದರೆ, ಎರಡನೇ ದೇಶದ ಶಾಸಕನು "ಎಲ್ಲಿಂದಾದರೂ ಆಗಲಿ ಸ್ತ್ರೀಯರನ್ನು ತನ್ನಿರಿ! ಅವರನ್ನು ಲಗ್ನವಾಗಿರಿ! ಮಕ್ಕಳನ್ನು ಹುಟ್ಟಿಸಿರಿ! ರಾಷ್ಟ್ರವನ್ನು ಬೆಳೆಯಿಸಿರಿ! ರಾಷ್ಟ್ರದ ಸಂಪತ್ತು ಬೆಳಸಿರಿ" ಎಂದು ಬಹಿರಂಗವಾಗಿ ಆಜ್ಞೆ ವಿಧಿಸಬಹುದು.



ಅತ್ತ ಕಡೆಯ ರಕ್ಷಕನು ಇತ್ತ ಕಡೆಯ ಒಬ್ಬ ಸುಂದರ ಯುವತಿ

" ಸಾಬಿ " ಯೊಡನೆ ಯಾವ ಪ್ರಕಾರ ಪ್ರೇಮ ಬೆಳೆಯಿಸಿದ್ದನೆಂಬುದು ತಿಳಿಯದಂತಾಗಿತ್ತು. ಇತ್ತ ಕಡೆಯ ರಕ್ಷಕ ದೀದಾರಸಿಂಹನಿಗೆ ಈಪ್ರೇಮ ಪ್ರಸಂಗದ ಸಂಗತಿಯ ಬಗ್ಗೆ ಮೊದಲಿಗೆ ಕೆಲವು ಸಂದೇಶವೆನಿಸಿದ್ದರೂ ಅವನು ಅದರ ಬಗ್ಗೆ ಹೆಚ್ಚು ಲಕ್ಷ ಕೊಟ್ಟಿರಲಿಲ್ಲ. ಸಾಬಿಯು ಈ ಬಳಿಯ ಮೇರೆಯನ್ನು ದಾಟಿ ಜೀವಂತವಾಗಿ ಯಾವ ಕಾಲಕ್ಕೂ ಹೋಗಲಾರಳೆಂದು ಅವನು ತಿಳಿದಿದ್ದ. ಇಬ್ಬರ ಪ್ರಣಯಪ್ರೇಮವು ಬಳಿಯ ಮೇರೆಯ ಅತ್ತ-ಇತ್ತದಲ್ಲಿಯೇ ತನ್ನ ಕೋವಿಯ ಒಂದೇ ಶಬ್ದದಿಂದ ಸಮಾಪ್ತವಾಗುವದೆಂದು ಅವನು ನಂಬಿದ್ದ. ಅಲ್ಲದೆ ತಾನು ಈ ರೀತಿ ಮಾಡುವದರಿಂದ ಪ್ರಜೆಗಳ ಶಾಂತಿ ಮತ್ತು ರಾಜನೀತಿಯನ್ನು ನಡೆಯಿಸಿದಂತಾಗುವದೆಂದೂ ಅವನ ತರ್ಕ. ತನ್ನ ಗಡಿಯ ಬಳಿಯ ಮೇರೆಯ ಮುಂದೆ ಒಂದು ಹೆಜ್ಜೆ ಸಹ ಮುಂದೆ ಇಡುವಂತಿದ್ದಿಲ್ಲ ಏಕೆಂದರೆ ಆ ರೀತಿಯ ವರ್ತನೆ, ಎರಡೂ ದೇಶಗಳ ಒಡಂಬಡಿಕೆಯ ವಿರುದ್ಧವಾಗುತ್ತಿತ್ತು. ಅವನು ಕೇವಲ ತನ್ನ ಮೇರೆಯ ಸಂರಕ್ಷಣೆಯ ಜವಾಬ್ದಾರಿಯುಳ್ಳವನಾಗಿದ್ದನೇ ಹೊರತು ಅದರಾಚೆಯ ಪ್ರದೇಶಕ್ಕೆ ಹೋಗಿಯಿಲ್ಲ. ಅವನು ಹೋಗ ಬೇಕೆಂಬ ಇರಲಿಲ್ಲ. ಆದರೆ ಸಾಬಿಯ ಪ್ರೇಮಿಯು ಮೇರೆಯನ್ನು ದಾಟಿ ಇರುತ್ತಿದ್ದನು-ಆಚೆಗೆ.

ಈ ದಿನ ಮಧ್ಯಾಹ್ನ ಅತ್ತ ಕಡೆಯ ರಕ್ಷಕನು ಅವನಿಗೆ ಮುಂಜಾಗ್ರತೆ ಕೊಟ್ಟಿದ್ದ ''ಏನೇ ಆಗಲಿ, ಈ ದಿವಸ ರಾತ್ರಿ ಸಾಬಿಯು ನನ್ನ ಗುಡಿಸಲಿನಲ್ಲಿ ಇರುತ್ತಾಳೆ. ಅಲ್ಲದೆ ಕೊನೆಯವರೆಗೂ ನನ್ನವಳಾಗಿ ಉಳಿಯುವಳು "

ದೀದಾರಸಿಂಹನಿಗೆ '' ಈ ಬಗೆಯ ಬೆದರಿಕೆಯು ಕೇವಲ ಅವನಿಗೇ ಅಲ್ಲ, ಅವನ ರಾಷ್ಟ್ರಕ್ಕೆ, ಪ್ರಜೆಗಳಿಗೆ ಆಳುವ ಅರಸನಿಗೆ ಕೂಡ" ಇದು ಕಾಗಲಾರದೆಂಬ ಅನುಭವವಾಯಿತು. ಇದು ಗೌರವದ ಪ್ರಶ್ನೆ. ಇಂಥ ಪ್ರಸಂಗದಲ್ಲಿ ಅವನಾದರೂ ಹೇಗೆ ಸುಮ್ಮನಾದಾನು? ಕೋವಿಯ ಮೇಲೆ ಕೈಯಾಡಿಸುತ್ತ ಹೇಳಿದ. '' ಸಾಧ್ಯವಿಲ್ಲ ಶಾಹಗುಲ್, ಇದು ಸಾಧ್ಯವಿಲ್ಲ" ಎಂದು.

ಶಾಹಗುಲ್‌ನು '' ನಾನು ಪಠಾಣನಿದ್ದೇನೆ. ಪಠಾಣ ಎಂದೂ

ಸುಳ್ಳು ಹೇಳುವದಿಲ್ಲ!"

"ನಾನೂ ಶೀಖನಿದ್ದೇನೆ. ಶೀಖನು ಯಾವಾಗಲೂ ಮರ್ಯಾದೆಗೆ ಸಾಯುತ್ತಾನೆ." ದೀದಾರಸಿಂಹನೆಂದ ಗರ್ಜಿಸುತ್ತ.

ಶಹಗಲ್‌ನು ಹಿ! ಹಿ:! ಎಂದು ವಿಕಟಹಾಸದಿಂದ "ಇದು ನಮ್ಮ ನ್ನಾಳುವವರ ಎದುರಿಸುವಿಕೆಯಲ್ಲ. ನಮ್ಮ ಪ್ರಜೆಗಳ ನಡುವೆ ಕಾಳಗವಿಲ್ಲ. ಒಬ್ಬ ಪಠಾಣ ಮತ್ತು ಶೀಖನ ನಡುವೆ ಕಾಳಗವಿದೆ. ಎರಡು ರಾಷ್ಟ್ರಗಳ ಎರಡು ವ್ಯಕ್ತಿಗಳ ನಡುವೆ ಕಾಳಗವಿದೆ. ಎರಡು ದೇಶಗಳ ಇಬ್ಬರು ರಕ್ಷಕರ ನಡುವೆ ಕಾಳಗ, ಒಪ್ಪಿಗೆಯೇ ನಿನಗೆ?"

ದೀದಾರಸಿಂಹನು ಮೀಶೆಯನ್ನು ಹುರಿ ಮಾಡುತ್ತ "ಒಪ್ಪಿಗೆಯಿದೆ ನೂರು ಸಾರೆ ಒಪ್ಪಿಗೆ!"

ಶಹಗುಲ್‌ನು ಮತ್ತೆ ಮುಗುಳು ನಗುತ್ತ,—

"ಆದರೆ ನನ ನಿನ್ನಲ್ಲಿ ಯಾವ ಜಗಳವಂತೂ ಇಲ್ಲ ಅಲ್ಲವೇ ಸರದಾರ" ಎಂದು ಪ್ರಶ್ನಿಸಿದ

ದೀದಾರಸಿಂಹನೂ ಈ ಸಾರೆ ಮುಗುಳು ನಕ್ಕನು.

"ಎಳ್ಳಷ್ಟೂ ಇಲ್ಲ. ಆದರೆ ಸಾಬಿಯನ್ನು ತಡೆಯೋವದು ಮಾತ್ರ ನನ್ನ ಧರ್ಮ."

ಶಹಗುಲ್‌ನು "ನೀನು ಆಕೆಯನ್ನು ತಡೆಯಲಾರೆ- ಎಂದಿಗೂ ತಡೆಯಲಾರೆ. ಆಕೆಯು ನನ್ನವಳಿದ್ದಾಳೆ."

'ನಾನು ತಡೆಯುತ್ತೇನೆ. ಅವಳು ನನ್ನ ರಾಜ್ಯದ ಮಗಳು-ಪ್ರಜೆ ಇದ್ದಾಳೆ."

"ನಮ್ಮ ಮನಸ್ಸುಗಳು ಕೂಡಿಬಿಟ್ಟಿವೆ. ನಮ್ಮನ್ನು ಜಗತ್ತಿನ ಯಾವ ಅರಸನೂ ತಡೆಯಲಾರ!"

ದೀದಾರಸಿಂಹನಿಗೆ ಸಿಟ್ಟು ಬಂದಿತು ಆವನು ಕೋವಿಯ ಕಡೆಗೆ ಸಂಜ್ಞೆ ಮಾಡುತ್ತಾ ಹೇಳಿದನು. "ನೋಡು ಖಾನ! ನನ್ನ ಕೋವಿ ಆಕೆಯನ್ನು ತಡೆಯುವದು. ನನ್ನ ಮೂರ್ತಿಯು ಆಕೆಯನ್ನು ತಡೆಯುವದು. ನನ್ನ ದೇಶದ ಬಿಂದು. ಬಿಂದುವು ಆಕೆಯನ್ನು ತಡೆಯುವದು. ಇವು ತಮ್ಮ ಮಗಳ ಅಪಮಾನವನ್ನು ಸಹನ ಮಾಡಲಾರವು."

ಶಹಗುಲ್‌ನು ಹುಚ್ಚನಂತೆ ಭಯಂಕರವಾಗಿ ಚೀರಿದ್ದರ ಪರಿಣಾಮ ವಾಗಿ ಇಡೀ ಕೊಳ್ಳವೆಲ್ಲ ಗಡಚಿಕ್ಕಿ ಆ ಪರ್ವತಕ್ಕೆ ಅಪ್ಪಳಿಸಿ ಪ್ರತಿಧ್ವನಿಯಾಗಿ ಆಕಾಶದಲ್ಲಿ ಲೀನವಾಯಿತು ನಂತರ ಅವರು ಕಿಸೆಯೊಳಗಿಂದ ಒಂದು ರೇಶಿಮೆಯ ವಸ್ತ್ರ ತೆಗೆದು ಅದನು ಬಡಿಗೆಯ (ಲಾಠಿ) ತುದಿಗೆ ಹಚಿ ದೀದಾರಸಿಂಹನಿಗೆ ತೋರಿಸುತ್ತ– "ಇವನ್ನು ನೋಡಿಕೊಂಡಿರು! ಗುಡಿಸಲಿನ ಹೊರಗಡೆ ಇದು ಯಾವ ಕಾಲಕ್ಕೆ ಹಾರಾಡುವದನ್ನು ನೀನು ನೋಡುವಿಯೋ, ಅಗ ಸಾಬಿಯು ನನ್ನ ಗುಡಿಸಲಿನಲ್ಲಿ ಬಂದಿದ್ದಾಳೆಂದು ತಿಳಿಯಬೇಕು. ಗೊತಾಯಿತೆ ?

ದೀದಾರಸಿಂಹನ ಕಣ್ಣುಗಳು ವಿಸ್ಮಯಂತೆವಾಗಿಬಹಳ ದೊಡ್ಡವಾದವು. ಅವನು ಆ ಕರವಸ್ತ್ರವನ್ನು ನೋಡಿದನು. ಅದರ ಬಣ್ಣವು ಕೆಂಪಗಿದ್ದು ದಂಡೆಗುಂಟ ಹಸಿರು ದಾರದಿಂದ ಹೆಣೆಯಲ್ಪಟ್ಟಿತ್ತು. ಅವನ ಕಣ್ಣುಗಳ ಮುಂದೆ ಯುದ್ಧದ ಭಯಂಕರ ಚಿತ್ರವು ತಿರುಗಹತ್ತಿತು. ಅದರಲ್ಲಿ ಸಾವಿರಾರು ನಿರಪರಾಧಿಗಳು ತುಂಡು ತುಂಡಾಗಿ ಬೀಳಹತ್ತಿದ್ದಾರೆ. ಖಡ್ಗಗಳು ಹೊಳೆಯುತ್ತಿವೆ. ಜಯ ಧ್ವನಿಯು ಗಡಚಿಕ್ಕಿದೆ. ಇಡೀ ಭೂಮಿಯಲ್ಲಿ ರಕ್ತದಿಂದ ಕೆಂಪಾಗಹತ್ತಿದೆ. ಅಲ್ಲದೆ ಈದೃಶ್ಯದ ಹಿಂದೆ ಸ್ತ್ರೀ ಭೂಮಿ ಮತ್ತು ಹಣವು ಮನುಷ್ಯನ ಮೇಲೆ ವಿಕಟಹಾಸ್ಯ ಮಾಡಹತ್ತಿವೆ. ತಿರಸ್ಕಾರಪೂರ್ಣ ವಿಕಟಹಾಸ್ಯ. ಮತ್ತು ಪಾಶ್ಚಾತ್ಯ ಇತಿಹಾಸಕಾರರ ಹಾಗೆ ನಿಂತ ಪರ್ವತಗಳ ವಕ್ಷಸ್ಥಲದ ಮೇಲೆ ಕಾಲನ ಕಲಾಕಾರನು ಒಂದು ಹೊಸ ಯುದ್ಧದ ಹೊಸ ಚಿತ್ರವನ್ನೆಳೆಯ ಹತ್ತಿದ್ದಾರೆ. ಅದರ ಮೇಲೆ ಹೊಸ ಹೊಸ ಹೆಸರಿನೆ ಒಬ್ಬಸ್ತ್ರೀಯುಸಲುವಾಗಿ ಯುದ್ಧ, ಇದರಲ್ಲಿ ಸಾವಿರಾರುಜನ ಸತ್ತರು ಒಂದು ದೇಶವಸಲುವಾಗಿ ಯುದ್ಧ, ಇದರಲ್ಲಿ ಲಕ್ಷಾವಧಿ ಜನ ಮಡಿದರು ಒಂದು ಒಡಂಬಡಿಕೆಯ ಸಲುವಾಗಿ ಯುದ್ಧ, ಇದರಲ್ಲಿ ಕೋಟ್ಯಾವಧಿ ಪ್ರಜೆಗಳು ಮರಣಹೊಂದಿದರು ..........

ದೀದಾರ ಏನನ್ನೂ ಹೇಳದಾದ. ಅವನ ಮೀಸೆಯ ಕೂದಲುಗಳು ಹುರಿಗೊಂಡವು. ಕೈಗಳು ನಡುಗಹತ್ತಿದವು. ನಾಲಿಗೆಯು ಒಣಹತ್ತಿತು. ಬಹಳ ಜುಲುಮೆಯಿಂದ "ಒಳ್ಳೇದು, ಶಹಗುಲ್ ! ಸ್ವಚ್ಛಂದವಾಗಿ ಹಾರಾಡಿಸು ನಿನ್ನ ಕರವಸ್ತ್ರವನ್ನು! ಆದರೆ ಇದನ್ನು ನೆನಪಿನಲ್ಲಿಟ್ಟು

[illegible] ಕೇಳುವವರೋ ಆಗಲಿ [illegible]”

[illegible] ನಗುತ್ತ ತನ್ನ ಗುಡಿಸಲಿನೊಳಗೆ ಹೋದನು.

೨

ಇನ್ನೂ ಚಂದ್ರನುದಯಿಸಿದ್ದಿಲ್ಲ. ಸುತ್ತು ಸರಹದ್ದಿನ ನಿಬಿಡವಾದ ಕೊಳ್ಳದಲ್ಲಿ ನಿಃಶಬ್ದತೆ ಮತ್ತು ಕತ್ತಲೆಯು ಇಬ್ಬರೂ ಸಹೋದರಿಯರಂತೆ ಬಾಹುಪಾಶದಲ್ಲಿ ಸಿಕ್ಕಿಬಿದ್ದು ಲೋಲಾಡುತ್ತಿದ್ದವು

ಈ ದಿವಸ ರಾತ್ರಿ ಏನಾಗುತ್ತದೆಯೆಂಬುದು ಭವಿಷ್ಯದ ಗರ್ಭದಲ್ಲಡಗಿದ [illegible] ಕಲ್ಲು ಸಹ [illegible]. ಕಲ್ಲುಗಳು ಕೂಡ [illegible] ಅವರ ದೃಢನಿಷ್ಠೆಯ ಬಗ್ಗೆ [illegible]. ಎರಡು ದೇಶಗಳ ರಾಜನೀತಿಗಳ ತಿಕ್ಕಲಾಟವಾಗುತ್ತಿತ್ತು. ಎರಡು [illegible] ರಕ್ಷಕರು [illegible] ತಮ್ಮ ಕೋವಿಗಳನ್ನು [illegible] ಪರಿಸ್ಥಿತಿ, [illegible] ತರುಣಿಯು [illegible] ತನ್ನ ದೇಶದ [illegible] ಹೋಗುವವನು ದೇಶದ [illegible] ಪ್ರಜೆಗಳ ಶಾಂತಿಗೆ ಗಂಡಾಂತರವಿತ್ತು,

ದೀದಾರಸಿಂಗನು ಈ ಪರಿಗಾ ಹುಡಿದುಂಬಿದ ನೆಲದ ಮೇಲೆ ಕೂತು ನಡುಗಹತ್ತಿದ್ದನು ಅವನಿಗೆ ಶಹಗುಲನಿಗಿಂತಲೂ ಸಾಬಿಯ ಮೇಲೆ ಬಹಳ ಸಿಟ್ಟು ಬರಹತ್ತಿತು.

“ನಾಯಿಯಂಥವಳು! ಆಕೆಗೆ ದೇಶದಲ್ಲಿ ಯಾವ ಗಂಡಸೂ ಸಿಗಲಿಲ್ಲವೆ? ಇವತ್ತು ನನ್ನ ಕೈಗೆ ಸಿಗಲಿ, ಈ ದಿವಸ ರಾತ್ರಿ....!”

ಕೊಂಚ ಚಳಿಯು ಅನುಭವವಾದ ಕೂಡಲೇ ಅವನು ಎದ್ದು ಆಡ್ಯಾಡಹತ್ತಿದನು ದೂರದ ಹಕ್ಕಿಯನ್ನು ನೋಡಿ ಎರಗುವ ಗಿಡಗನಂತೆ ಅವನ ಶರೀರದಲ್ಲಿ ಗಿಡಗನ ಆತ್ಮವು ಪ್ರವೇಶ ಮಾಡಿತು. ತುಸು ಸಪ್ಪಳವಾದರೂ ಸಹ ಅವನ ಕಿವಿಗಳು ಜಾಗರೂಕವಾಗಿದ್ದವು, ಕೈಗಳು ತಮ್ಮಷ್ಟಕ್ಕೆ ತಾವೆ ಕೋವಿಯ ಮೇಲೆ ಹೋಗುತ್ತಿದ್ದವು, ಅವನು ಆಕಾಶದ ಕಡೆಗೆ ನೋಡಿದ

ನಕ್ಷತ್ರಗಳು ಮಿನಗುತ್ತಿದ್ದುವು, ಚಂದ್ರನು ಉದಯನಾಗುವ ಲಕ್ಷಣವಿನ್ನೂ ಇದ್ದಿಲ್ಲ, ನಿಶ್ಶಬ್ದತೆ ಮತ್ತು ಕತ್ತಲೆಯು ಸರಿಸಮಾನವಾಗಿ ತೂಗಾಡುತಿದ್ದವು. ಅಪರೂಪಕ್ಕೊಮ್ಮೆ ಬೀಸುವ ಸುಳಿಗಾಳಿಯು ಗಿಡಗಳ ಎಲೆಗಳನ್ನು ಕದಡಿಬಿಡುತ್ತಿತ್ತು, ಮತ್ತು ದೂರಿನ ಹಳ್ಳಿಯ ನಾಯಿಗಳ ಬೊಗಳುವಿಕೆಯೂ ಕೇಳಿ ಬರುತ್ತಿತ್ತು. ಅವನಿಗೆ ದು:ಖವಾಗುತ್ತಿತ್ತು. ತಾನು ಸಾಬಿಯನ್ನು ತಡೆಯುವ ಬಗ್ಗೆ ಹಗಲಿನಲ್ಲಿ ಯಾವುದಾದರೊಂದು ಉಪಾಯವನ್ನೇಕೆ ಮಾಡಲಿಲ್ಲಿ? ಊರ ಜನರನ್ನುಏಕೆ ಕೂಡಿಸಲಿಲ್ಲ? ಊರ ಅಧಿಕಾರಿಗೆ ಗುಪ್ತರೂಪವಾಗಿ ಶಹಗುಲ್‌ನ ಅಭಿಲಾಷೆಯ ಬಗ್ಗೆ ಯಾಕೆ ಸೂಚನೆ ಕೊಡಲಿಲ್ಲ? ಆದರೆ ಈ ಎಲ್ಲ ಕೆಲಸಗಳನ್ನು ತಿಳಿದೂ ಸಹ ಮಾಡಲಿಲ್ಲ. ಇದು ಅವನ ಮತ್ತು ಅವನ ವೀರತ್ವದ ಪರೀಕ್ಷೆಯ ಪ್ರಶ್ನೆಯಾಗಿತ್ತು. ಒಂದು ಕಡೆ ಶಹಗುಲ್ ಒಬ್ಬರೇ ಇದ್ದಾರೆ. ಎರಡನೇ ಕಡೆಗೆ ಆ ಬೇರೆ ಜನರನ್ನು ಹೇಗೆ ಕೂಡಿಸಬೇಕು! ಕಾಯಿದೆಯಿಂದ ಸಹಾಯದ ಸಲುವಾಗಿ ಹೇಗೆ ಭಿಕ್ಷ ಮಾಡಬೇಕು! ಶಹಗುಲ್‌ನು ಅವನ ಮೇಲೆ ತಿರಸ್ಕಾರಪೂರ್ವಕವಾಗಿ ಆ ಮಹಾಬಲಶಾಲಿ ಹೊರಟ! ಒಂದು ಹುಡಿಗೆಯ ಸಲುವಾಗಿ ಇಷ್ಟು ಜನರನ್ನು ಕೂಡಿಸಿದ್ದಾನೆ. ನಿನ್ನ ನನ್ನ ಇಬ್ಬರಲ್ಲಿ ಕಾಳಗವಾದರೇನೇ ಸವಿ ಬರುತ್ತಿತ್ತು. ಎಂದು ಅನ್ನಬಹುದಿತ್ತು. ಈ ವಿಚಾರದಿಂದ ಮತ್ತು ತನ್ನ ಶಕ್ತಿಯ ಮೇಲೆ ಪೂರ್ಣ ವಿಶ್ವಾಸವಿದ್ದುದರಿಂದ ಅವನು ಶಹಗುಲ್‌ನ ಆಹ್ವಾನವನ್ನು ಸ್ವೀಕಾರ ಮಾಡಿದ್ದನು ಮತ್ತು ಈಗ ಅದರ ಹಾದೀ ಕಾಯುತಿದ್ದನು ಇನ್ನು ಅವನು ಸಾಬಿಯನ್ನು ತಡೆಹಿಡಿದರೆ ದೇಶದ ತುಂಬೆಲ್ಲ ಅವನ್ನ ಹೆಸರು ವಿರಾಜಮಾನವಾಗುತ್ತಿತ್ತು. ಎಂತಹ ಸ್ವಾಮಿಭಕ್ತ ಮತ್ತು ಕರ್ತವ್ಯದಕ್ಷರಕ್ಷಕನಿದ್ದಾನೆ. ಇವನು! ಒಬ್ಬನೇ ಕಾಯಿದೆಯ ಪವಿತ್ರತೆಯ ರಕ್ಷಣೆ ಮಾಡಿದ್ದಾನೆ, ದೇಶದ ಶಾಂತಿಯನ್ನು ಕಾಯ್ದಿದ್ದಾನೆ. ಮುಂತಾದ ವಿಚಾರಗಳು ಅವನ ಮಸ್ತಿಷ್ಕದಲ್ಲಿ ಬರತೊಡಗಿದವು.

ಅವನು ಹಿಂದೊಮ್ಮೆ ಮುಂದೊಮ್ಮೆ ಅಡ್ಡಾಡುತ್ತ ಇದೇ ವಿಚಾರ ಮಾಡುತ್ತಿದ್ದ. ಮತ್ತು ಮೇಲೆ ಮೇಲೆ ಶಹಗುಲ್‌ನ ಗುಡಿಸಲದ ಕಡೆಗೆ ನೋಡುತ್ತಿದ್ದನು. ಅವನು ಸೂರ್ಯಾಸ್ತದ ಮೊದಲೇ ತನ್ನ ಲಾಠಿಯನ್ನು ಭೂಮಿಯಲ್ಲಿ ನಟ್ಟಿದ್ದನು. ಆದರೆ ಅದರ ಮೇಲೆ ತನ್ನ ವಸ್ತ್ರವನ್ನು ಕಟ್ಟಿದ್ದಿಲ್ಲ

ಶಹಗುಲ್‌ನ ಗುಡಿಶಲಲ್ಲಿಂದ ಹೊಗೆ ಹೊರಡುವದು ನಿಂತಿತು ಮತ್ತು ತುಸು ಹೊತ್ತಿನ ನಂತರ ದೀಪವನ್ನು ಆರಿಶಲಾಯಿತು. ದೀದಾರಸಿಂಹನು ಈಗ ಶಹಗುಲ್‌ನ ಹೆಜ್ಜೆಯು ಸಪ್ಪಳವನ್ನು ಮತ್ತು ಅವನ ಹಟಿಂಗರಂತಹ ಪ್ರೇಮಿಯು ವಿರಹ ಗಾನವನ್ನು ಕೇಳತೊಡಗಿದನು ಅವನ ಆಗೊಮ್ಮೆ ಈಗೊಮ್ಮೆ ಇವನನ್ನು ಕರೆದು "ದೀದಾರಸಿಂಹ! ಕೇಳುತ್ತಿಸ್ಯೀ ಊಾ ಗೆಳೆಯಾ! ಬಹಳ ಸವಿಯುದೆ ಈ ಸ್ಥಳದಲ್ಲಿ!" ಎಂದು ಅಂದಾ,

ದೀದಾರಸಿಂಹನು ವ್ಯಂಗ್ಯಪೂರ್ವಕವಾಗಿ ನಗುತ್ತ,

" ಇನ್ನೂ ಸಾಬಿ ಬಂದಿಲ್ಲೇನು? ಎಂದಿದ್ದ. ಅದಕ್ಕೆ ಶಹಗುಲ್‌ನು

" ಆಕೆಯು ಯಾವಾಗ್ಗೆ ಬರುವಳೋ ಆಗ ಧ್ವಜವು ಹಾರಾಡವದು, ಕೆಂಪುಧ್ವಜ ವಿಜಯಧ್ವಜವು!" ನುಡಿದಿದ್ದ.

ಇದಕ್ಕೆ ದೀದಾರಸಿಂಹನು ಸುಮ್ಮನಾಗಿದ್ದು ಅವನಿಗೆ ವಿಶ್ವಾಸವಿದ್ದಿತು ಸಾಬಿ ಬರುವದು, ಮತ್ತು ಅವನ ಕಂಣು ತಪ್ಪಿಸಿ ಹೊರಡುವದು ಕಠಿಣ ಷಷ್ಟೇ ಅಲ್ಲ, ಎಷ್ಟೂ ಸಾಧ್ಯವಿಲ್ಲದ ಮಾತು. ಶಹಗುಲ್‌ನು ತನು ಭ್ರಮೆಯಲ್ಲಿದ್ದರೆ ಇರಲಿ. ಪ್ರತಿಯೊಬ್ಬ ಪ್ರೇಮಿಯು ಇಂತಹ ಭ್ರಮೆಯಲ್ಲಿ ಹೋಸ ಹೋಗುವದುಂಟು ಕಾಲವೇ ತೋರಿಸುವದು ಗೆಲುವು ಯರದಾಗುವದೆಂದು. ಕಾಯುದೆಯದೋ ಅಥವಾ ಪ್ರೇಮದ್ದೋ, ಶೀಖನದೋ ಅಥವಾ ಪಠಾಣನದೋ?

ರಾತ್ರಿಯು ಸಾವಕಾಶವಾಗಿ ಪರ್ವತ ಮತ್ತು ಕೊಳ್ಳದ ಮೇಲಿಂದ ರೇಶಿಮೆಯ ಪರದೆಯಂತೆ ಮೆಲ್ಲನೆ ಸರಿಯುತ್ತಾ ಬರುತ್ತಿತ್ತು. ಆಕಾಶಹ ಒಂದು ಭಾಗವು ಚಂದ್ರನ ಪ್ರಕಾಶದಿಂದ ಶೋಭಿಸುತ್ತಿತ್ತು. ಆದರೆ ಚಂದ್ರನು ಮುಂದಿನ ಪರ್ವತದ ಹಿಂದೆ ಇದ್ದನು ಶಹಗುಲ್‌ನ ಗುಡಿಸಲಿನಲ್ಲ ಪೂರ್ಣ ಶಾಂತತೆ ಮತ್ತು ಕತ್ತಲೆ ಇತ್ತು. ಇದರಿಂದ ಅದರಲ್ಲಿ ಜೀವನದ ಯಾವ ಗುತರ್ೂ ಇಲ್ಲವೆನಿಸುತ್ತಿತ್ತು.

ಒಮ್ಮೆಲೆ ಪರ್ವತದ ಮೇಲ್ಕೆ ಚಂದ್ರನು ಕಾಣ ಸಿಕ್ಕನು. ದೊಡ್ಡ ವರ್ತುಲಾಕಾರದಲ್ಲಿದ್ದನು. ಕೊಳ್ಳವೆಲ್ಲ ಪೂರ್ಣ ಮಿಂಚಹತ್ತಿತು. ಸೀಮೆಯ (ಗಡಿಯ ಬಿಳಿಯ ಮೂರ್ತಿಯೂ ಮಿಂಚಹತ್ತಿತು. ನಿಃಶಬ್ದತೆ ಮತ್ತು ಕತ್ತಲೆಯು, ಅಂಜಿಕೆಯಿಂದ ಓಡಿಹೋಗುವ ಬಾಲಕಿಯರಂತ ಕಾಣದಾದವು.

ಒಮ್ಮಿಂದೊಮ್ಮೆಲೇ ದೀದಾರಸಿಂಹನು ಬೆಚ್ಚಿಬಿದ್ದನು. ಆಗಲೇ ಅವನು ಶಹಗುಲ್‌ನ ಗುಡಿಸಲು ಮುಂದಿನ ಲಾರಿಯ ಮೇಲೆ ಹಾರಾಡುತ ಕರವಸ್ತ್ರವನ್ನು ನೋಡಿದ್ದು ಸಾಬಿ ಬಂದಿದ್ದಳು. ಯುದ್ಧದವಕರೆಯು ಬದಿಸ್ತ ಯುಗಚಿತ್ರಕಾರನು ತನ್ನ ಲೇಖನಿಯನ್ನು ಹಿರಿದು ಅನಾದಿಕಾಲದಿಂದ ನಿಂತಿದ್ದನು. ಪರ್ವತಗಳು ಆವನ ಸಲುವಾಗಿ ತಮ್ಮ ವಕ್ಷಸ್ಥಲವನ್ನು ತೆರೆದು ಬಿಟ್ಟಿದ್ದವು ಈಗ ಅವಳಿಗೆ ತನ್ನ ಧರ್ಮವೇನಿದೆ? ಕಾಯಿದೆ ಏನನ್ನುತ್ತಿದೆ? ರಾಜನೀತಿಯ ಆಜ್ಞೆ ಏನಿದೆ? ಎಂಬ ಬಗ್ಗೆ ತುಸು ಹೊತ್ತಿನವರೆಗೂ ಯಾವ ನಿಶ್ಚಯಕ್ಕೂ ಬಾರದಾದನು.

ಅವನು ಬಿಳಿಯ ಮೂರ್ತಿಯಿಂದ ಮುಂದೆ ಹೋಗುವ ಹಾಗೆ ಇಲ್ಲ. ಭೂಮಿಯು ಮೂರ್ತಿಯ ಹತ್ತಿರ ಕೂಡುತ್ತಿದೆ ನಿಜ, ಆದರೆ ಮೂರ್ತಿಯು ಒಂದು ಗೆರೆ ಮಾತ್ರ. ಅದು ಎರಡು ದೇಶಗಳ ನಡುವೆ ಎಳೆಯಲ್ಪಟ್ಟಿದೆ ಮನುಷ್ಯ-ಮನುಷ್ಯರ ನಡುವೆ ಎಳೆಯಲ್ಪಟ್ಟಿದೆ. ಪ್ರಜೆ-ಪ್ರಜೆಗಳ ನಡುವೆ ಎಳೆಯಲ್ಪಟ್ಟಿದೆ ಏತಕ್ಕಾಗಿ? ಸ್ತ್ರೀಯ ಸಲುವಾಗಿ, ಭೂಮಿಯ ಸಲುವಾಗಿ ಮುದ್ದಿನ ಸಲುವಾಗಿ. ಇವೆಲ್ಲವೂ ಬಹುಕಾಲದಿಂದ ಪ್ರತಿಯೊಂದು ರಣಭೂಮಿಗೆ ಆಹ್ವಾನ ಕೊಡುತ್ತಾ ಬಂದಿದ್ದವು. ಮನುಷ್ಯನ ತಿರಸ್ಕಾರ ಮಾಡುತ್ತ ಬಂದಿದ್ದವು. ಕಾಯಿದೆಯ ಮೇಲೆ ಟೀಕೆ ಮಾಡುತ್ತ ಬಂದಿದ್ದು ರಾಜನೀತಿಯ ಮೇಲೆ ಉಗುಳುತ್ತ ಬಂದಿವೆ.

ದೀದಾರಸಿಂಹನು ಕೋಪದಿಂದ ನಡುಗಹತ್ತಿದನು. ಅವನ ಕಣ್ಣುಗಳಿಂದ ಜ್ವಾಲೆಗಳೇಳಹತ್ತಿದವು. ಅವನು ಕಾಯಿದೆಯನ್ನು ಮುರಿದು ಮೂರ್ತಿಯಿಂದ ಕೆಲವು ಹೆಜ್ಜೆ ಮುಂದೆ ಸಾಗಿ ನಿಂತನು ಮತ್ತು ಕೋವಿಯನ್ನು ಸಾವರಿಸಹತ್ತಿದನು, ಅವನಿಗೆ "ಮೂರ್ತಿಯ ಮುಂದಿನ ಭೂಮಿಯು ಅವನದಲ್ಲ ಯಾರೋ ಎರಡನೇಯವರದು! ಶಹಗುಲ್‌ನ ಒಡೆಯನದು! ಅಲ್ಲಿ ಕಾಯ್ದೆ ಬೇರೆ ಇದೆ. ಆದರ ರಾಜನೀತಿ ಬೇರೆ ಇದೆ. ಎಂಬ ಅನುಭವವಾಗಹತ್ತಿತು.

ದೀದಾರನು ಆ ಮೂರ್ತಿಯ ಹತ್ತಿರ ಪುನಹ ತಿರುಗಿ ಬಂದನು. ಆದರೂ ಅವನ ಸಿಟ್ಟು ಶಾಂತವಾಗಲಿಲ್ಲ. ಶಹಗುಲ್ ಮತ್ತು [illegible] ಅವನ ಕಾನೂನಿನ ಮೇಲೆ ಉಗುಳಿದ್ದರು. ಅವನ ಅರಸನ ಅಪಮಾನ

ಮಾಡಿದ್ದರು. ಅವನು ಹೊಸ ಹುರುಪಿನಿಂದ ಮುಂದೆ ನಡೆದನು. ಮತ್ತೂ ನಡೆದನು ಅಲ್ಲಿಯ ವರೆಗೂ ಧ್ವಜದ ಸಮೀಪಕ್ಕೆ ಮುಟ್ಟಿದನು. ಅವನ್ನ್ ಶೀವ್ರವೇ ಆ ವಸ್ತ್ರವನ್ನು ಗುರುತಿಸಿದನು. ಕೆಂಪು ವಸ್ತ್ರ, ಕರವಸ್ತ್ರ. ಯಾವ್ದ ದನ್ನು ಮಧ್ಯಾಹ್ನ ಶಾಹಗುಲ್‌ನು ತೋರಿಸಿದ್ದನೋ, ಯಾವದನ್ನು ಇಬ್ಬರೂ ಯುದ್ಧದ ಕರೆಯನ್ನಾಗಿ ಮಾಡಿಕೊಂಡಿದ್ದರೋ ಅ ೀ ಕರವಸ್ತ್ರ! ಅವನು ಕೋವಿಯನ್ನು ಎತ್ತಿ ಹಿಡಿದು, ಗುಡಿಸಲಿನ ಕಡೆಗೆ ನಡೆದನು.

ಗುಡಿಸಲಿನಲ್ಲಿ ಚಕ್ಕಂದದಿಂದ ಒಂದು ಮಂಚದ ಮೇಲೆ ಶಹಗುಲ್ ಮತ್ತು ಸಾಬಿ ತೋಳಲ್ಲಿ ತೋಳು ಹಾಕಿ ಆಸಂಗದಿಂದ ಮಲಗಿದ್ದರು. ದೀ ದಾರಸಿಂಹನು ಇವರಿಬ್ಬರನ್ನೂ ನೋಡಿದ ಮತ್ತು ಅವರಿಗೆ ಕೋವಿಯ ಗುರಿ ಇಡುವಾಗಲೇ ಶಹಗುಲ್‌ನ ಶಬ್ದಗಳು ನೆನಪಿಗೆ ಬಂದವು. ಕೂಡಲೇ ಕೊವಿ ಯನ್ನು ಬದಿಗಿರಿಸಿ ವಿಚಾರವಮಾಡಹತ್ತಿದ

ವಿಚಾರಪರವಶನಾಗಿ ಹೊರಟಾಗ ಅವನಿಗೆ ಅನುಭವವಾಗಹತ್ತಿತು. "ಈ ಕಾಲ್ಕೆಳಗೆ ಇದ್ದ ಭೂಮಿಯು ಕೇವಲ ಶಹಗುಲ್‌ನದಷ್ಟೇ ಅಲ್ಲ, ಎಲ್ಲರದೂ ಇದೆ. ಮತ್ತು ಅಖಂಡ ಅವಿಭಾಜ್ಯವಿದೆ. ಈ ಬಿಳಿಮೂರ್ತಿಯು ಕೇವಲ ಗೆರೆ ಮಾತ್ರ. ಅದು ಮನುಷ್ಯರನ್ನು ಪ್ರತ್ಯೇಕಿಸಲ್ಪಡುವದಕ್ಕೆ ಮನು ಷ್ಯ-ಶತೃಗಳಿಂದ ಎಳೆಯಲ್ಪಟ್ಟದೆ"

ಆವೇಶದಲ್ಲವನು ಗುರಿಯಿಟ್ಟು ಬಿಳಿಯ ಕಲ್ಲಿನ ಮೇಲೆ ಕಟ್ಟೆ ಕೋವಿ ಯ ಕುದುರೆಯನ್ನೆಳೆದನು. ಶಬ್ದವಾಯಿತು "ಠಾಂಯ ಠಾಂಯ" ಎಂದ್ಸ್

ಕೂಡಲೇ ಶಹಗುಲ್-ಸಾಬಿಯರು ಹೊರಗೆ ಬಂದು "ಏನದು?" ಎಂದು ಗಾಬರಿಯಾಗಿ ಕೇಳಿದರು.

ದೀದಾರಸಿಂಹನು ವಿಚಿತ್ರ ಆವೇಶದಿಂದ,

"ಏನೂ ಇಲ್ಲ, ಮಾನವನ ಹಂಚುಕೆಯಲ್ಲಿ ಏನೂ ಅರ್ಥವಿಲ್ಲ. ಅದಕ್ಕಾಗಿ ಆ ಕಲ್ಲನ್ನೇ ಹಾರಿಸಿಬಿಟ್ಟಿದ್ದೇನೆ!" ಎಂದು ನಡಗುತ್ತ ಹೇಳಿದ.

ಶಹಗುಲ್ ಮತ್ತು ಸಾಬಿಯರು ಕಂಗೆಟ್ಟವರಂತೆ ಅವನನ್ನೇ ನೋಡು ತ್ತ ನಿಂತರು.

—ಎಂ. ದಸ್ತಗೀರ, ಗದಗ.